# PACKAGE TOURS

Hotel Room Accom. & South Indian Veg. Food

## SOUTH INDIA : 10 DAYS

Nov 27 Jan 28

Guruvayur, Kaladi, Trivandram, Kovalam Beach, Suchindram, Kanyakumari, Rameshwaram, Madurai, Trichy, Srirangam, Tanjore, Kumbakonam, Chidambaram, Thiruvannamalai, Navagraha Temples

## SHAKTIPEETHA MANALI SPECIAL : 18 DAYS

Mar 15 Apr 14

Attari Border [Indo-Pak Border], Amritsar, Chandigarh, Shimla, Kufri, Kullu, Manali, Rohtang Pass (Optional), Vashishta, Baijnath, Chamunda, Naina Devi, Kangra, Chintpurni, Jwalamukhi, Vaishnavi Devi, Kurukshetra, New Delhi

## KOLKATA - DARJEELING : 16 DAYS

Mar 26

Darjeeling, Gangtok, Siliguri, Kolkata, Puri, Konark, Chilka Lake, Bhuvaneshwar

## DWARAKA & JYOTHIRLINGA : 24 DAYS

Feb 06 Mar 10

Pushkar, Nathadwar, Kankroli, Eklingji, Udaipur, Mt. Abu, Mathru Gaya, Dwaraka, Bet Dwaraka, Nagesham, Mul Dwaraka, Porbandar, Veraval, Somnath, Dakor, Ahmedabad, Ujjain, Omkareshwar, Parli, Grishneshwar, Nasik, Triyambak, Shirdi, Shanisinganapur, Bhimashankar

## MINI ANDHRA : 05 DAYS

Nov 22 Dec 09

Mantralaya, Srishaila, Mahanandi, Ahobilam (Nava Narasimha)

## KASHI - NAIMISHARANYA - CHITRAKOOT : 14 DAYS

Mar 16

Kashi, Ayodhya, Naimisharanya, Allahabad, Chitrakoot, Gaya, Bodhgaya

## KASHI - NEPAL : 16 DAYS

Apr 20

Kashi, Kathmandu, Pokhara, Mukthinath (Optional), Manokamana, Gorakhpur

## INTERNATIONAL TOURS








Dubai, Singapore, Malaysia, Thailand, Sri Lanka



# Shri Hansaa Travels

Recognised by Department of Tourism, Govt. of Karnataka

: 640, 40th Cross, 8th Block, Jayanagar, Bangalore - 70
: hansaatravels@gmail.com : hansaatravels.com
080-26643276 / 26543891 / 9341215612 / 9341415612

ವ್ಯವಸ್ಥಾಪಕ ಸಂಪಾದಕರು
ಸ್ವಾಮಿ ಮುಕ್ತಿದಾನಂದ
ಸಂಪಾದಕರು
ಸ್ವಾಮಿ ಜ್ಞಾನಯೋಗಾನಂದ
ನೆರವು:
ಆರ್. ಎಸ್. ಪೂರ್ಣಾನಂದ
ಡಾ. ಕೆ. ಎಲ್. ಪ್ರಸನ್ನಾಕ್ಷಿ
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ
ಶ್ರೀರಾಮಕೃಷ್ಣ ಆಶ್ರಮ, ಮೈಸೂರು
ಮುದ್ರಣ
ಮಯೂರ್ ಗ್ರಾಫಿಕ್ಸ್, ಬೆಂಗಳೂರು

E-mail:
vivekaprabha@hotmail.com
kannada.vivekaprabha@gmail.com
Website: vivekaprabha.net
ಫೋನ್ : 9481533505

ಮುಖಪುಟ:

**ಮಾತೃ ಮಂದಿರ**

ಜಯರಾಮಬಾಟಿ, ಶ್ರೀಮಾತೆಯವರ ಜನ್ಮಸ್ಥಳ

### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

### ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ): ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಡಿಸೆಂಬರ್-2015 ಸಂಪುಟ 16 ಸಂಚಿಕೆ 12



# ವಿವೇಕ ಪ್ರಭ

## ಪರಿವಿಡಿ















ಅದೊಂದು ವಸಂತಕಾಲದ ಸುಂದರ ಬೆಳಗು. ರಾಜನು ರಾಜೋದ್ಯಾನವನ್ನು ಹೊಕ್ಕಿದ್ದಾನೆ. ಮನದಣಿಯೆ ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುತ್ತಿದ್ದಾನೆ. ......





ಪ್ರಾರ್ಥನೆ

# ಶ್ರೀಶಾರದಾದೇವ್ಯಷ್ಟಕದಿಂದ



**ದೇವಿ ಪ್ರಸನ್ನವದನೇ ಕರುಣಾವತಾರೇ**
**ದಿವ್ಯೋಜ್ಜ್ವಲದ್ಯುತಿಮಯಿ ತ್ರಿಜಗಜ್ಜನಿತ್ರಿ ।**
**ಕಲ್ಯಾಣಕಾರಿಣೆ ವರಾಭಯದಾನಶೀಲೇ**
**ಮಾತರ್ವಿರಾಜ ಸತತಂ ಮಮ ಹೃತ್ಸರೋಜೇ ॥**

ಪ್ರಸನ್ನವದನೆಯಾದ, ಕರುಣೆಯೇ ಅವತಾರವೆತ್ತಿದಂತಿರುವ, ದಿವ್ಯವೂ ಉಜ್ಜ್ವಲವೂ ಆದ ಕಾಂತಿಯಿಂದ ಬೆಳಗುತ್ತಿರುವ, ಮೂರು ಲೋಕಗಳ ಜನನಿಯಾದ, ಎಲ್ಲ ಕಲ್ಯಾಣವನ್ನೂ ಉಂಟುಮಾಡುವವಳಾದ, ವರ ಹಾಗೂ ಅಭಯಗಳನ್ನು ದಾನ ಮಾಡುವುದೇ ಸ್ವಭಾವವಾಗಿರುವ ದೇವಿ, ಜಗನ್ಮಾತೆ, ನನ್ನ ಹೃದಯವೆಂಬ ಕಮಲದಲ್ಲಿ ಸದಾ ವಿರಾಜಮಾನಳಾಗಿ ನೆಲೆಸು.

**ವೈರಾಗ್ಯಭಕ್ತಿವರದಾ ಭವತಾರಿಣಿ ತ್ವಂ**
**ಮಾಂಗಲ್ಯಶಾಂತಿನಿಲಯಾ ಹ್ಯಮೃತಸ್ವರೂಪಾ ।**
**ವಿದ್ಯಾ ಪರಾ ತ್ರಿಜಗದುದ್ಧರಣೈಕಸೇತು-**
**ರ್ಮಾತರ್ವಿರಾಜ ಸತತಂ ಮಮ ಹೃತ್ಸರೋಜೇ ॥**

ಹೇ ಮಾತೆ, ವೈರಾಗ್ಯ , ಭಕ್ತಿಗಳನ್ನು ವರವಾಗಿ ನೀಡುವ, ಸಂಸಾರ ಸಾಗರವನ್ನು ದಾಟಿಸುವ ಭವತಾರಿಣಿಯೇ ನೀನು. ಎಲ್ಲ ಮಂಗಳಗಳಿಗೂ, ಶಾಂತಿಗೂ ನಿವಾಸವಾಗಿರವವಳು ನೀನು. ಅಮೃತಸ್ವರೂಪಳೂ, ಪರಾವಿದ್ಯೆಯೂ ಆಗಿರುವ ನೀನು ಮೂರುಲೋಕಗಳನ್ನೂ ಉದ್ಧರಿಸಬಲ್ಲ ಏಕೈಕ ಸೇತುವೆಯಾಗಿರುವೆ. ನೀನು ನನ್ನ ಹೃದಯವೆಂಬ ಕಮಲದಲ್ಲಿ ಸದಾ ವಿರಾಜಮಾನಳಾಗಿ ನೆಲೆಸು.

**ವಿಶ್ವಾತ್ಮಿಕೇ ಪರಮಪಾವನಸೌಮ್ಯರೂಪೇ**
**ಮೋಹಾಂಧಕಾರಪರಿಹಾರಿಣಿ ಮೋಕ್ಷದಾತ್ರಿ ।**
**ಸರ್ವಾಶ್ರಯೇ ಭಯಹರೇ ಜಗದೇಕಗಮ್ಯೇ**
**ಮಾತರ್ವಿರಾಜ ಸತತಂ ಮಮ ಹೃತ್ಸರೋಜೇ ॥**

ಸಮಸ್ತ ವಿಶ್ವದ ಆತ್ಮಸ್ವರೂಪಳೂ, ಪರಮ ಪಾವನವಾದ ಸೌಮ್ಯ ರೂಪಳೂ ಆದ, ಮೋಹವೆಂಬ ಕತ್ತಲನ್ನು ಪರಿಹರಿಸುವ, ಮೋಕ್ಷವನ್ನು ದಯಪಾಲಿಸುವ, ಎಲ್ಲರಿಗೂ ಆಶ್ರಯ ನೀಡುವ, ಭಯವನ್ನು ನಿವಾರಿಸುವ, ಜಗತ್ತಿಗೆಲ್ಲ ಏಕೈಕ ಗುರಿಯಾಗಿರುವ ಮಾತೆಯೇ, ನೀನು ನನ್ನ ಹೃದಯವೆಂಬ ಕಮಲದಲ್ಲಿ ಸದಾ ವಿರಾಜಮಾನಳಾಗಿ ನೆಲೆಸು.

**ಶ್ರೀರಾಮಕೃಷ್ಣಮಯಜೀವಿತ ಈಶ್ವರೀ ತ್ವಂ**
**ತದ್ಭಾವವಿಗ್ರಹಮಯೀ ತದಭಿನ್ನಸತ್ತಾ ।**
**ಶ್ರೀರಾಮಕೃಷ್ಣಮಯಪಾವಕದೀಪ್ತಶಕ್ತೇ**
**ಮಾತರ್ವಿರಾಜ ಸತತಂ ಮಮ ಹೃತ್ಸರೋಜೇ ॥**

ಜೀವನವೆಲ್ಲ ಶ್ರೀರಾಮಕೃಷ್ಣಮಯವಾಗಿರುವ, ಅವರ ಭಾವವೇ ವಿಗ್ರಹರೂಪವನ್ನು ತಳೆದಂತಿರುವ ಹಾಗೂ ಅವರಿಗಿಂತ ಭಿನ್ನರಲ್ಲದ ಈಶ್ವರಿಯೇ, ನೀನು ಶ್ರೀರಾಮಕೃಷ್ಣರೆಂಬ ಬೆಂಕಿಯ ಜ್ವಲನಶಕ್ತಿಯಾಗಿರುವೆ. ಹೇ ಮಾತೆ, ನೀನು ನನ್ನ ಹೃದಯವೆಂಬ ಕಮಲದಲ್ಲಿ ಸದಾ ವಿರಾಜಮಾನಳಾಗಿ ನೆಲೆಸು.

ಸೂಕ್ತಿಪ್ರಭ

# ಶ್ರೀಮಾತೆಯವರ ಉಪದೇಶಾವಳಿ

* ಮಗೂ, ಈ ಮನುಷ್ಯ ಜನ್ಮವನ್ನು ಪಡೆಯಲು ನೀನು ಬಹಳ ಅದೃಷ್ಟವಂತನಾಗಿದ್ದಿರಬೇಕು. ಭಗವಂತನಲ್ಲಿ ಗಾಢವಾದ ಭಕ್ತಿಯನ್ನು ಹೊಂದಿರು. ಯಾರೇ ಆದರೂ ಅತ್ಯಂತ ಕಷ್ಟಪಟ್ಟು ಕೆಲಸ ಮಾಡಬೇಕು. ಪ್ರಯತ್ನವಿಲ್ಲದೆ ಏನನ್ನಾದರೂ ಪಡೆಯಲಾಗುವುದೆ? ದೈನಂದಿನ ಕೆಲಸಗಳ ನಡುವೆ, ಅತ್ಯಂತ ಒತ್ತಡದ ಸಮಯದ ನಡುವೆಯೂ ಪ್ರಾರ್ಥನೆಗಾಗಿ ಒಂದಿಷ್ಟು ಸಮಯವನ್ನು ಮೀಸಲಿಡಬೇಕು. ನಾನು ದಕ್ಷಿಣೇಶ್ವರದಲ್ಲಿದ್ದಾಗ ಅನೇಕ ಕೆಲಸಗಳಲ್ಲಿ ಮುಳುಗಿರುತ್ತಿದ್ದೆ. ಅಷ್ಟಾಗಿಯೂ ನಾನು ಪ್ರಾರ್ಥನೆ, ಧ್ಯಾನಗಳನ್ನು ಮಾಡುತ್ತಿದ್ದೆ.

* ಶಿಷ್ಯ: ನಿಮ್ಮ ಆಶೀರ್ವಾದವನ್ನು ಪಡೆದವರು ನಿಜಕ್ಕೂ ಅದೃಷ್ಟಶಾಲಿಗಳೇ ಸರಿ. ಆದರೆ ಭವಿಷ್ಯದಲ್ಲಿ ಜನಿಸುವ ಜನರ ಪಾಡೇನು?

ಶ್ರೀಮಾತೆ: ಏನು ಹಾಗೆಂದರೆ? ಅವರೂ ಕೂಡ ಏಕೆ ಗುರಿ ತಲುಪಲಾರರು? ದೇವರು ಎಲ್ಲೆಡೆ ಇದ್ದಾನೆ, ಎಲ್ಲ ಕಾಲದಲ್ಲೂ ಇದ್ದಾನೆ. ಶ್ರೀರಾಮಕೃಷ್ಣರು ಎಂದೆಂದಿಗೂ ಇದ್ದಾರೆ. ಅವರ ಕೃಪೆಯಿಂದಾಗಿ ಅವರೆಲ್ಲ ಗುರಿ ತಲುಪುವರು. ಬೇರೆ ದೇಶಗಳಲ್ಲೂ ಜನರು ಭಗವಂತನ ಸಾಕ್ಷಾತ್ಕಾರವನ್ನು ಹೊಂದುವುದಿಲ್ಲವೆ?

* ಏನೇ ಆಹಾರವನ್ನು ಸೇವಿಸುವುದಿದ್ದರೂ ಮೊದಲು ಅದನ್ನು ಭಗವಂತನಿಗೆ ಸಮರ್ಪಿಸಿದ ಬಳಿಕ ಸೇವಿಸಬೇಕು. ಬೇರೆ ಯಾವ ಆಹಾರವನ್ನೂ ಸೇವಿಸಬೇಡ. ನೀನು ಸೇವಿಸುವ ಆಹಾರ ಎಂಥದೋ, ಅದೇ ರೀತಿ ನಿನ್ನ ರಕ್ತದ ಗುಣ. ಭಗವಂತನಿಗೆ ಅರ್ಪಿಸಿದ ಆಹಾರವನ್ನು ತಿಂದರೆ ನಿನ್ನಲ್ಲಿ ರಕ್ತ ಹಾಗೂ ಮನಸ್ಸು ಪರಿಶುದ್ಧವಾಗುವುದು. ಅದರಿಂದ ನಿನಗೆ ವಿಶೇಷ ಶಕ್ತಿ ಲಭಿಸುವುದು. ನಿನ್ನ ಮನಸ್ಸು ಪರಿಶುದ್ಧವಾಗಿದ್ದರೆ, ನಿನ್ನ ಶ್ರದ್ಧೆ, ಭಕ್ತಿಗಳೂ ಪರಿಶುದ್ಧವಾಗಿರುವುವು.

* ಆಸೆಯಿಲ್ಲದಿರಲು ಪ್ರಾರ್ಥಿಸಬೇಕು. ಏಕೆಂದರೆ, ಆಸೆಯೇ ಎಲ್ಲ ದುಃಖಗಳ ಮೂಲ. ಹಲವು ಬಾರಿ ಜನ್ಮ-ಮೃತ್ಯುಗಳು ಉಂಟಾಗಲು ಅದೇ ಕಾರಣ. ಅದೇ ಮುಕ್ತಿಯ ಮಾರ್ಗದಲ್ಲಿ ವಿಘ್ನ.

# ವಿವೇಕಪ್ರಭ

**ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ**

**ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020**



## ಚಂದಾ ಅರ್ಜಿ

ಮಾನ್ಯರೇ, (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

☐ ನನ್ನನ್ನು / ಈ ಕೆಳಕಂಡ ಹೆಸರಿನವರನ್ನು 'ವಿವೇಕಪ್ರಭ' ಪತ್ರಿಕೆಯ ಚಂದಾದಾರರನ್ನಾಗಿ/ ಪೋಷಕರನ್ನಾಗಿ ಮಾಡಬೇಕಾಗಿ ವಿನಂತಿ

☐ ನನ್ನ/ ಕೆಳಕಂಡ ಹೆಸರಿನವರ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈಗಿನ ಚಂದಾಸಂಖ್ಯೆ.........................

**ನನ್ನ ವಿಳಾಸ**

ನನ್ನ ಹೆಸರು...........................................................................

ವಿಳಾಸ...................................................................................

..........................................................................................

...................................................ಪಿನ್..........................

**ಪತ್ರಿಕೆ ಪಡೆಯುವವರ ವಿಳಾಸ**

ಹೆಸರು...................................................................................

ವಿಳಾಸ...................................................................................

..........................................................................................

...................................................ಪಿನ್..........................

ಚಂದಾ ವಿವರ: (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

| 1 ವರ್ಷದ ಚಂದಾ | 3 ವರ್ಷದ ಚಂದಾ | ಆಜೀವ ಚಂದಾ | ಪೋಷಕರ ಸಹಾಯಧನ |
|---|---|---|---|
| ₹ 140 | ₹ 375 | ₹ 3000 | ₹ 5000 |

**ಹಣವನ್ನು ಮನಿ ಆರ್ಡರ್ / ಡ್ರಾಫ್ಟ್ (ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ A/c ಹೆಸರಿನಲ್ಲಿ) ಮೂಲಕ ಕಳುಹಿಸುತ್ತಿದ್ದೇನೆ.**

ವಿವರ..........................................................................

1. **ಹೊರ ಊರಿನ ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.**
2. **ವಿದೇಶಗಳಿಗೆ ಅನ್ವಯವಾಗುವ ಚಂದಾ ವಿವರಗಳಿಗೆ ಹಾಗೂ ಇತರ ವಿವರಗಳಿಗಾಗಿ ನಮಗೆ ಬರೆಯಿರಿ.**

**ಸಹಿ**



ವಿವೇಕಪ್ರಭ ವಿಶೇಷ ಸಂಚಿಕೆ – ಜನವರಿ ೨೦೧೬

## 'ಸಾಧನೆಗಾಗಿ ಸಹಾಯಕ ಗ್ರಂಥಗಳು'

2016ರ ಜನವರಿ ಸಂಚಿಕೆಯು '**ಸಾಧನೆಗಾಗಿ ಸಹಾಯಕ ಗ್ರಂಥಗಳು**' ಎಂಬ ವಿಷಯವನ್ನು ಕುರಿತ ವಿಶೇಷ ಸಂಚಿಕೆಯಾಗಿ ಹೊರಬರಲಿದೆ. ಆಧ್ಯಾತ್ಮಿಕ ಜೀವನಕ್ಕೆ ಅತ್ಯಂತ ಉಪಯುಕ್ತವಾದ ಗ್ರಂಥಗಳು ಹಲವು ಸಂದರ್ಭಗಳಲ್ಲಿ ಸಾಧಕನಿಗೆ ಅತ್ಯಮೂಲ್ಯವಾದ ಮಾಹಿತಿಗಳನ್ನು ನೀಡುತ್ತವೆ; ಅದರೊಂದಿಗೆ ಸಾಧನೆಗೆ ಅಗತ್ಯವಾದ ಸ್ಫೂರ್ತಿ, ಪ್ರೇರಣೆ ಹಾಗೂ ಬೌದ್ಧಿಕ ಸ್ಥಿರತೆಯನ್ನು ನೀಡುತ್ತವೆ. ಸಾಧನೆಯೇ ಪ್ರಧಾನ ವಿಷಯವಾಗಿರುವ ಕೆಲವು ಶಾಸ್ತ್ರಗ್ರಂಥಗಳ ಹಾಗೂ ಶ್ರೀರಾಮಕೃಷ್ಣ ಪರಂಪರೆಯ ಪ್ರಾತಿನಿಧಿಕ ಕೃತಿಗಳ ಪರಿಚಯ, ಅವುಗಳ ವಸ್ತುವಿನ್ಯಾಸ, ಸಾರ ಹಾಗೂ ಉಪಲಬ್ಧಿ – ಈ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಸಿದ್ಧ ಚಿಂತಕರು ಹಾಗೂ ಲೇಖಕರು ಬರೆದ ಲೇಖನಗಳನ್ನು ಒಳಗೊಂಡಿರುವ ಸಂಚಿಕೆ ಇದಾಗಿದೆ. ಇದು ಆಧ್ಯಾತ್ಮಿಕ ಸಾಧಕರಿಗೆ ಅತ್ಯಮೂಲ್ಯ ವಾದ ಮಾಹಿತಿಗಳನ್ನು ಒದಗಿಸುವ ಒಂದು ಉತ್ತಮ ಕೈಪಿಡಿಯಾಗಿದೆ.

**ಈ ಅಪೂರ್ವ ಸಂಚಿಕೆಯನ್ನು ನಮ್ಮ ಚಂದಾದಾರರಿಗೆ ಉಚಿತವಾಗಿಯೇ ಕಳುಹಿಸಿಕೊಡಲಾಗುವುದು. 10ಕ್ಕಿಂತ ಹೆಚ್ಚಿನ ಪ್ರತಿಗಳನ್ನು ಕೊಂಡುಕೊಳ್ಳ ಬಯಸುವವರಿಗೆ ಶೇ. 15 ರಿಯಾಯಿತಿ ನೀಡಲಾಗುವುದು.** **ಬೆಲೆ : ರೂ. 50/-** **ಪುಟಗಳು : ಸುಮಾರು 112**

ಹೆಚ್ಚಿನ ಪ್ರತಿಗಳನ್ನು ಕಾದಿರಿಸಲು ಇಂದೇ ಸಂಪರ್ಕಿಸಿ :

'ವಿವೇಕಪ್ರಭ ವಿಭಾಗ', ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು 570 020

Email: **kannada.vivekaprabha@gmail.com** ಫೋನ್ : 9481533505



**ಎಲ್ಲವೂ ಮನಸ್ಸನ್ನೇ ಅವಲಂಬಿಸಿದೆ. ಮನಸ್ಸಿನಲ್ಲೇ ಶುದ್ಧ, ಅಶುದ್ಧ ಎಲ್ಲವೂ. ಮನುಷ್ಯ ತನ್ನ ಮನಸ್ಸನ್ನು ಮೊದಲು ಮಲಿನಗೊಳಿಸಿಬಿಡುತ್ತಾನೆ. ಅದರಿಂದಲೇ ಅವನು ಇತರರ ದೋಷಗಳನ್ನು ನೋಡುತ್ತಾನೆ. ಇತರರ ದೋಷವನ್ನು ನೋಡಿದರೆ ಅವನಿಗೇನಾಗುತ್ತದೆ? ಅದರಿಂದ ಅವನಿಗೇ ಹಾನಿಯಾಗುತ್ತದೆ. ದೋಷವನ್ನು ನೋಡಬಾರದು. ಇತರರ ದೋಷ ನೋಡದಿರುವುದು ಕ್ಷಮಾರೂಪದ ತಪಸ್ಸು.**

**–ಶ್ರೀಮಾತೆ ಶಾರದಾದೇವಿ**

# ಭಾವನಿರ್ಭರ ಭಕ್ತಿ

## ನಿಜವಾದ ಆನಂದ

ಎಲ್ಲಿ ನಾವು ನಿಜವಾದ ಆನಂದವನ್ನು ಹೊಂದುವೆವು? ಎಲ್ಲಿ ಯಾವ ಭಯವೂ ಇಲ್ಲವೋ, ಎಲ್ಲಿ ಯಾವ ಚಿಂತೆಯೂ ಇಲ್ಲವೋ, ಅದೇ ರೀತಿ ಎಲ್ಲಿ ಬೇರೆ ಯಾವ ನಿರೀಕ್ಷೆಯೂ ಇಲ್ಲವೋ ಅಲ್ಲಿ. ಪ್ರಾಪಂಚಿಕ ಜೀವನದಲ್ಲಿ ಇದು ಸಾಧ್ಯವಾಗುವುದಿದ್ದರೆ ಎರಡೇ ಸಂದರ್ಭಗಳಲ್ಲಿ: ಒಂದು, ಮಗು ತಾಯಿಯ ಬಳಿ ಇದ್ದಾಗ. ಎರಡು, ಗಾಢ ನಿದ್ರೆಯಲ್ಲಿದ್ದಾಗ. ಆದರೆ ಈ ಎರಡು ಸ್ಥಿತಿಗಳೂ ಶಾಶ್ವತವಲ್ಲ. ಕಳೆದು ಹೋದ ಶೈಶವ, ಬಾಲ್ಯ ಮತ್ತೆ ಬರುವುದೇ ಇಲ್ಲ. ಎಚ್ಚರಗೊಂಡ ಬಳಿಕ ನಿದ್ರೆಯ ಆನಂದವಿಲ್ಲ ; ಮತ್ತೆ ನಿದ್ರಿಸುವವರೆಗೆ ಪ್ರಪಂಚದ ಜಂಜಾಟ ತಪ್ಪಿದ್ದಲ್ಲ. ಗಾಢ ನಿದ್ರೆಯಲ್ಲಿ ನಮ್ಮನ್ನು ನಾವು ಸಂಪೂರ್ಣ ಮರೆಯುತ್ತೇವೆ; ಆದ್ದರಿಂದ ಅಲ್ಲಿ ಎಂಥ ಆನಂದವೇ ಇರಲಿ, ಅದರ ಅರಿವು ನಮಗಿಲ್ಲ. ಆನಂದದ ಅರಿವೇ ನಮಗಿಲ್ಲದೆ ಹೋದರೆ ಅಂಥ ಆನಂದ ನಿಜವಾದ ಆನಂದವೆ? ಈ ಎರಡು ಅವಸ್ಥೆಗಳನ್ನು ಬಿಟ್ಟರೆ ಉಳಿದ ಎಲ್ಲ ಅನುಭವಗಳೂ ನಿಜವಾದ ಆನಂದವನ್ನು ನೀಡಲಾರವು; ಕಾಲಮಿತಿಯುಳ್ಳ, ಅತೃಪ್ತಿ-ಭಯ-ಆತಂಕಗಳನ್ನು ಹುಟ್ಟಿಸುವ, ಆನಂದದ ಭ್ರಮೆಯನ್ನು ಮಾತ್ರ ಉಂಟುಮಾಡುವ ಸಂವೇದನೆಯನ್ನು ಅವು ನೀಡುವುವು. ಹಾಗಿದ್ದರೆ, ಈ ಜೀವನದಲ್ಲಿ ನಿಜವಾದ ಆನಂದವಿಲ್ಲವೆ?

ಇದೆ, ಯಾವ ಭಾವನೆ ನಿರ್ಭಯ, ನಿಶ್ಚಿಂತೆ ಹಾಗೂ ಆತ್ಮತೃಪ್ತಿ ಇವನ್ನು ಯಾವುದೇ ನಿಬಂಧನೆಗಳಿಲ್ಲದೆ ನೀಡಬಲ್ಲದೋ ಅಲ್ಲಿ ಮಾತ್ರ ಈ ಆನಂದ ಲಭ್ಯವಿದೆ. ಇವು ಮೂರೂ ಲಭ್ಯವಿರುವುದು ಭಗವಂತನಲ್ಲಿ ಸಂಪೂರ್ಣ ಶರಣಾಗತಿ ಹೊಂದಿದಾಗ ಮಾತ್ರ. ನಿಜವಾದ ಭಕ್ತಿ ಎಂದರೂ ಇದೇ; ಭಾವಭರಿತವಾದ ಭಗವದ್ಧ್ಯಾನ ಎಂದರೂ ಇದೇ. ನಿರಂತರ ಭಗವಂತನ ನೆನಪು, ಅವನ ಇರುವಿಕೆಯ ಭಾವ, ಅವನ ಆಶ್ರಯದಲ್ಲೇ ತಾನು ಸುರಕ್ಷಿತವಾಗಿರುವ ಅನಿಸಿಕೆ ಯಾವಾಗ ಸಾಧಕನಲ್ಲಿರುವುದೋ ಅದೇ ಅತ್ಯಾನಂದದ ಘಳಿಗೆಯೆನ್ನಬೇಕು. ಭಕ್ತನು ಇಂಥ ಅವಸ್ಥೆಯನ್ನು ಬಿಟ್ಟರೆ ಬೇರೇನನ್ನೂ ಬೇಡುವುದಿಲ್ಲ. 'ನಿನ್ನ ನಾಮಸ್ಮರಣೆ, ನಿನ್ನ ಚಿಂತನೆ, ನಿನ್ನ ನೆನಪು ನಿರಂತರವಾಗಿರಲಿ' ಎಂಬುದೇ ಭಕ್ತನ ಆರ್ತನಾದ. ಏರುಪೇರುಗಳಿಂದ ಕೂಡಿದ, ನಾನಾ ಬಗೆಯ ಭಾವನೆಗಳಿಂದ ತುಂಬಿದ ಮನಸ್ಸು ಭಗವಂತನನ್ನೇ ನಿರಂತರ ನೆನೆಯುವಂತೆ ಮಾಡುವುದೇ ಭಕ್ತನ ಸಾಧನೆ. ಅದಕ್ಕೆ ಸಹಾಯಕವಾದ ಕ್ರಿಯೆಗಳೆಲ್ಲವೂ ಭಕ್ತಿಯ ಆಚರಣೆಗಳು. ಭಗವಂತನ ರೂಪ, ಗುಣ, ವೈಭವಗಳನ್ನು ಹಲವು ವಿಧಾನಗಳಿಂದ ಕೀರ್ತಿಸುವುದು, ಹಾಡುವುದು; ನಾಮಸ್ಮರಣೆ, ಗುಣಧ್ಯಾನ, ನವವಿಧಭಕ್ತಿ – ಇವೆಲ್ಲ ಮನಸ್ಸನ್ನು ಅಂಥ ಶರಣಾಗತಿಗೆ, ಭಕ್ತಿಭರಿತವಾದ ಧ್ಯಾನಕ್ಕೆ ಸಿದ್ಧಗೊಳಿಸುವುದಕ್ಕಾಗಿಯೇ ಇವೆ. ಎಂದು ಮನಸ್ಸು ಸಹಜವಾಗಿ ಅಂಥ ಸ್ಥಿತಿಯನ್ನು ತಲುಪುವುದೋ, ಆಗ ಭಕ್ತನು ಬೇರೇನನ್ನೂ ಚಿಂತಿಸುವುದಿಲ್ಲ , ಬೇರೆ ಯಾವುದರಿಂದಲೂ ವಿಚಲಿತನಾಗುವುದಿಲ್ಲ. ಪ್ರಪಂಚದ ಘೋರ ಅನುಭವಗಳು ಅವನನ್ನು ಕಂಗೆಡಿಸುವುದಿಲ್ಲ. ಕಾರಣ, ಅವನು ಭಗವಂತನ ನೆಲೆಯನ್ನು ನಿರಂತರ ಸ್ಪರ್ಶಿಸುತ್ತಿರುತ್ತಾನೆ. ಇದೇ ಅತ್ಯುಚ್ಚ ಆನಂದದ ಸ್ಥಿತಿ.

## ಕೃಪೆಯ ಬಲ

ಈ ಬಗೆಯ ಸಂಪೂರ್ಣ ಶರಣಾಗತಿ ಬರುವುದು ಕೇವಲ ಭಗವಂತನ ಕೃಪೆಯಿಂದ ಮಾತ್ರ ಎಂದು ಮಹಾತ್ಮರೆಲ್ಲರೂ ಒಕ್ಕೊರಲಿನಿಂದ ಸಾರುತ್ತಾರೆ. ಆದ ಕಾರಣವೇ, ಕೃಪೆಗಾಗಿ ಭಗವಂತನನ್ನು ಪ್ರಾರ್ಥಿಸಬೇಕು. ಭಗವಂತನಿಗೆ ಗೊತ್ತಿದೆ, ಯಾವಾಗ ಭಕ್ತನ ಮನಸ್ಸು ಕೃಪೆಯನ್ನು ಸ್ವೀಕರಿಸಲು ತಯಾರಾಗಿದೆ, ಯಾವಾಗ ಅವನ ಮನಸ್ಸು ಮಾಲಿನ್ಯವನ್ನೆಲ್ಲ ತೊಳೆದು ಪರಿಶುದ್ಧವಾಗಿದೆ, ಯಾವಾಗ ಭಗವತ್ಕೃಪೆಯನ್ನು ಪಡೆದರೆ ಅವನ ಮನಸ್ಸು ಅಂಥ ಅನುಭವದ ಪ್ರಭಾವವನ್ನು ತಡೆದುಕೊಳ್ಳಬಲ್ಲುದು ಎಂದು. ಆದ್ದರಿಂದ ಭಕ್ತನು ಭಗವಂತನಿಗೆ ಯಾವುದೇ ನಿಬಂಧನೆ, ಕಾಲಮಿತಿಗಳನ್ನು ಒಡ್ಡಲಾರ; ಕೃಪೆಗಾಗಿ ಪ್ರಾರ್ಥಿಸುವುದು ಹಾಗೂ ಕಾಯುವುದೊಂದೇ ಅವನ ಕಾರ್ಯ. ತನ್ನ ಸರ್ವಸ್ವವನ್ನೂ ಭಗವಂತನಿಗೆ ಸಮರ್ಪಿಸುವುದೊಂದೇ ಅವನು ಮಾಡಬೇಕಾದ ಕೆಲಸ. ಇದು ಸಾಧ್ಯವಾದರೆ ಅವನ ಮನಸ್ಸು ಬಹುತೇಕ ತಯಾರಾದಂತೆ; ಭಗವತ್ಕೃಪೆ ಯಾವಾಗಲಾದರೂ ಬಂದುಬಿಡಬಹುದು. ಇದನ್ನು ಶ್ರೀರಾಮಕೃಷ್ಣರು ಸುಂದರವಾದ ಒಂದು ಉಪಮೆಯ ಮೂಲಕ ವಿವರಿಸುತ್ತಾರೆ: ''ಭಗವಂತನ

ಅನುಗ್ರಹವೆಂಬ ತಂಗಾಳಿ ಸರ್ವದಾ ನಿನ್ನ ಮೇಲೆ ಬೀಸುತ್ತಿರುವುದು. ಸಂಸಾರಸಾಗರದಲ್ಲಿ ನೀನು ಬೇಗ ಮುಂದುವರಿಯಬೇಕಾದರೆ ಮನಸ್ಸೆಂಬ ದೋಣಿಯ ಪಟವನ್ನು ಹರಡು.''

ಭಕ್ತಿಪರಂಪರೆಯಲ್ಲಿ ಭಗವತ್ಕೃಪೆಗೆ ಅತಿ ಹೆಚ್ಚಿನ ಪ್ರಾಮುಖ್ಯತೆಯಿದೆ. ಎಲ್ಲವೂ ದೇವರ ಕೃಪೆಯನ್ನೇ ಅವಲಂಬಿಸಿದೆ. ಅವನ ಇಚ್ಛೆಯಿಂದಲೇ ಪ್ರತಿಯೊಂದು ನಡೆಯುವುದು. ಇಡೀ ಪ್ರಪಂಚವೇ ಭಗವಂತನ ಸೃಷ್ಟಿ, ಜೀವಿಗಳೆಲ್ಲವೂ ಅವನ ಮಕ್ಕಳು. ಹೀಗಿರುವಾಗ, ಭಗವಂತ ಈ ಸೃಷ್ಟಿಯ ಪ್ರತಿಯೊಂದು ಕಣಕಣದಲ್ಲೂ ಇದ್ದಾನೆ, ಅವುಗಳ ಅಂತರ್ಯಾಮಿಯಾಗಿದ್ದುಕೊಂಡು ಕ್ರೀಡಿಸುತ್ತಾನೆ, ತನ್ನ ಲೀಲೆಯನ್ನು ನಡೆಸುತ್ತಾನೆ. ಈ ಸತ್ಯವನ್ನರಿಯದ ಮನುಷ್ಯನಲ್ಲಿ 'ನಾನೇ ಎಲ್ಲವನ್ನೂ ಮಾಡುತ್ತೇನೆ', 'ಇದು ನನಗೆ ಸೇರಿದ್ದು' ಎಂಬ ಅಹಂಕಾರಜನ್ಯವಾದ 'ನಾನು', 'ನನ್ನದು' ಭಾವನೆ ಮೂಡುತ್ತದೆ. ಶ್ರೀರಾಮಕೃಷ್ಣರು ತರಕಾರಿ ಬೇಯಿಸುವ ದೃಷ್ಟಾಂತದ ಮೂಲಕ ಇದನ್ನು ವಿವರಿಸುತ್ತಾರೆ:

''ಎಲ್ಲಿಯವರೆಗೆ ಭಗವಂತ ನಮ್ಮಲ್ಲಿ 'ಅಹಂ' ಎಂಬುದನ್ನು ಇಟ್ಟಿರುತ್ತಾನೋ ಅಲ್ಲಿಯವರೆಗೆ ಎಲ್ಲವೂ ಇದೆ. ಈ ಜಗತ್ತನ್ನು ಸ್ವಪ್ನವತ್ ಅಂತ ಹೇಳುವ ಹಾಗಿಲ್ಲ. ಒಲೆಯಲ್ಲಿ ಬೆಂಕಿ ಉರಿಯುತ್ತಿದೆ; ಅದಕ್ಕಾಗಿ ತಪ್ಪಲೆಯಲ್ಲಿ ಅಕ್ಕಿ, ಆಲೂಗಡ್ಡೆ, ಬದನೆಕಾಯಿ ಎಲ್ಲಾ ನೆಗೆದಾಡುತ್ತಿರುತ್ತವೆ, 'ನಾವು ಇಲ್ಲಿದ್ದೇವೆ! ನಾವು ನೆಗೆದಾಡುತ್ತಿರುತ್ತೇವೆ!' ಎಂಬುದಾಗಿ ಹೇಳುತ್ತಿರುವವೋ ಎಂಬಂತೆ. ಈ ಶರೀರವೇ ತಪ್ಪಲೆ, ಮನಸ್ಸು, ಬುದ್ಧಿಗಳೇ ನೀರು, ಇಂದ್ರಿಯ ವಿಷಯ ವಸ್ತುಗಳೇ ಅಕ್ಕಿ, ಬೇಳೆ, ಆಲೂಗಡ್ಡೆ, ಬದನೆಕಾಯಿ. 'ಅಹಂ' ಎಂಬುದೇ 'ನಾವು ನೆಗೆದಾಡುತ್ತಿದ್ದೇವೆ' ಎಂಬ ಅಭಿಮಾನ. ಸಚ್ಚಿದಾನಂದನೇ ಬೆಂಕಿ.'' *(ಶ್ರೀರಾಮಕೃಷ್ಣ ವಚನವೇದ, ಭಾಗ ೧, ಪು. ೨೧೦)*

ಅವನ ದುಃಖಗಳಿಗೆಲ್ಲ ಇದೇ ಕಾರಣ. ಎಲ್ಲಿ ಮನುಷ್ಯ ಭಗವಂತನ ಅಸ್ತಿತ್ವವನ್ನೇ ಎಲ್ಲೆಲ್ಲೂ ಕಂಡುಕೊಳ್ಳುವನೋ, ಕೃಪೆಗಾಗಿ ಭಗವಂತನನ್ನೇ ಪ್ರಾರ್ಥಿಸುವನೋ, ಆಗ ಮಾತ್ರ ಅವನ ದುಃಖಗಳು ಕೊನೆಗೊಳ್ಳುವವು; ಅವನ ಮನಸ್ಸು ಸತ್ಯ, ಜ್ಞಾನ, ಆನಂದಗಳನ್ನು ಹೊಂದಲು ಅಣಿಯಾಗುವುದು. ಶ್ರೀರಾಮಕೃಷ್ಣರು ತೋರಿಸಿಕೊಡುವ ಭಕ್ತಿಯ ಸರಳವಾದ ಮಾರ್ಗ ಇಂಥದು.

ಮನುಷ್ಯನು ತನ್ನನ್ನು ಹಾಗೂ ಪ್ರಪಂಚವನ್ನು ಮೀರಿದ ಶಕ್ತಿಯೊಂದರ ಅಸ್ತಿತ್ವವನ್ನು ಕಂಡುಕೊಂಡು, ಆ ಶಕ್ತಿಗೆ ಸಕಲವೂ ಅಧೀನ ಎಂಬುದನ್ನು ಅರಿತು, ತನ್ನ ಹಾಗೂ ಆ ಶಕ್ತಿಯ ಸಂಬಂಧವನ್ನು ಕುರಿತು ಚಿಂತಿಸತೊಡಗಿದುದೇ ಎಲ್ಲ ಆಧ್ಯಾತ್ಮಿಕ, ಧಾರ್ಮಿಕ ಹಾಗೂ ತಾತ್ತ್ವಿಕ ಪರಂಪರೆಗಳ ಹುಟ್ಟಿಗೆ ಕಾರಣವಾಯಿತು. ಒಂದೊಂದು ಪರಂಪರೆಯಲ್ಲೂ ಈ ಶಕ್ತಿಯ ಆವಿರ್ಭಾವವನ್ನು ಒಂದೊಂದು ಬಗೆಯಲ್ಲಿ ಕಂಡುಕೊಂಡರು; ಹಾಗಾಗಿ ವಿವಿಧ ಧರ್ಮ, ತತ್ತ್ವ, ಪರಂಪರೆಗಳು ಉಂಟಾದವು. ಅವೆಲ್ಲದರ ಸಾರವಿದು: ನಮ್ಮನ್ನು ಮೀರಿದ ಆ ಶಕ್ತಿಯ ಬಲದಿಂದಲೇ ನಮ್ಮ ಜೀವನ ಪರಿಪೂರ್ಣವಾಗುವುದು.

### ಭಗವಂತನ ಸಾನ್ನಿಧ್ಯ

ಸಾಧಕನ ಮನಸ್ಸು ಪಕ್ವವಾದಾಗ ಅವನು ಎಲ್ಲೆಲ್ಲೂ ಭಗವಂತನ ಅಸ್ತಿತ್ವವನ್ನೇ ಕಾಣುತ್ತಾನೆ; ಅವನನ್ನು ಕುರಿತು ಸದಾ ಚಿಂತಿಸುತ್ತಾನೆ, ಅವನೊಂದಿಗೆ ಮಾತುಕತೆಯಾಡುತ್ತಾನೆ. ಇದನ್ನೇ 'ಭಾವಪೂರ್ಣ'ವಾದ ಭಕ್ತಿ, 'ರಾಗಾಭಕ್ತಿ' ಎಂದು ವರ್ಣಿಸಲಾಗಿದೆ. ನಿರಂತರ ಭಗವಂತನ ಅಸ್ತಿತ್ವವನ್ನು ಅನುಭವಿಸುವುದು ಭಕ್ತಿಮಾರ್ಗದಲ್ಲಿ ಅತ್ಯಂತ ಉನ್ನತ ದರ್ಜೆಯ ಒಂದು ಸಾಧನೆ. ಅಲ್ಲಿ ಅದೊಂದು ಪ್ರಯತ್ನವಾಗಿ ಉಳಿಯುವುದಿಲ್ಲ ; ಸಹಜವಾದ, ಅಪ್ರಯತ್ನದ, ನಿರಂತರ ಪ್ರವಹಿಸುತ್ತಿರುವ ಭಾವನೆಯಾಗಿರುತ್ತದೆ. ಆದರೆ ಇದು ಒಮ್ಮೊಮ್ಮೆ ರಭಸದಿಂದ ಕೂಡಿದ ನೆರೆಯ ಪ್ರವಾಹದಂತೆ ಸಾಧಕನ ಸರ್ವಸ್ವವನ್ನೂ ಕಬಳಿಸುವ ಸಾಮರ್ಥ್ಯವನ್ನು ಹೊಂದಿದೆ; ಅಂಥ ವೇಳೆ ಭಾವಾತಿರೇಕದಿಂದ ತನ್ನ ಮಾನಸಿಕ ಸ್ಥಿರತೆಯನ್ನು ಕಳೆದುಕೊಳ್ಳದಂತೆ, ವಿವೇಕ-ವಿಚಾರಗಳ ಬೆಂಬಲವೂ ಅವನಿಗಿರಬೇಕು ಎಂದು ಸ್ವಾಮಿ ವಿವೇಕಾನಂದರು ಎಚ್ಚರಿಸುತ್ತಾರೆ. ಆದರೆ ಪ್ರಾರ್ಥನೆ, ಕೃತಿಗಳ ಬಲದಿಂದ ಭಕ್ತನು ಎಲ್ಲ ಅಪಾಯಗಳನ್ನೂ ಮೀರಿ ಭಗವಂತನನ್ನು ಸೇರುತ್ತಾನೆ; ಆದ್ದರಿಂದ ಅವನಲ್ಲಿ ಪೂರ್ಣ ಶರಣಾಗತಿ ಹೊಂದಿರುವುದೇ ಅತ್ಯಂತ ಸುರಕ್ಷಿತವಾದ ಉಪಾಯ ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಎಲ್ಲಿ ಸಾಧನೆ ಸಹಜವಾಗಿ ನಡೆಯುವುದೋ, ಅಲ್ಲಿ ಯಾವ ಅಪಾಯವೂ ಇಲ್ಲ ಎಂಬುದೇ ಈ ಹೇಳಿಕೆಗಳ ಅಂತರಾರ್ಥ.

### ಪ್ರಾಪಂಚಿಕ ಜಂಜಾಟ

ದಿನದ ಬಹುಪಾಲನ್ನು ಲೌಕಿಕ ವ್ಯವಹಾರಗಳಲ್ಲೇ ನಾವು ಕಳೆಯುತ್ತೇವೆ. ಮನಸ್ಸನ್ನು ಭಗವಂತನಿಂದ ದೂರ ಮಾಡುವ ಸುದ್ದಿಮಾಧ್ಯಮಗಳಿಂದಲೂ ಹತ್ತುಹಲವು ಬಾಧ್ಯತೆಗಳಿಂದಲೂ ನಾವು ಬಂಧಿತರಾಗಿದ್ದೇವೆ. ಪ್ರಾರ್ಥನೆ, ಧ್ಯಾನ, ಭಕ್ತಿಗೆ ಮೀಸಲಿಡುವ ಕೆಲವೇ ನಿಮಿಷಗಳಲ್ಲೂ ಮನಸ್ಸು ಪ್ರಪಂಚದ ಎಲ್ಲೆಡೆ ಸುತ್ತಾಡಿ ಬರುತ್ತದೆ. ಇಂಥ ಸನ್ನಿವೇಶದಲ್ಲಿ ಸಾಧಕ ನಿರಂತರ ಭಗವಂತನ ಇರುವಿಕೆಯನ್ನು ಕಂಡುಕೊಳ್ಳುವುದು ಹೇಗೆ? - ಇದು ಆಧುನಿಕ ಜನಸಾಮಾನ್ಯರ ಸಹಜವಾದ ಸಮಸ್ಯೆ. ಆದರೆ ಇದು ಕೇವಲ ಇಂದಿನ ಸಮಸ್ಯೆಯಲ್ಲ. ಪ್ರಪಂಚ ಹಿಂದೆಯೂ ಇತ್ತು; ಇಂದೂ ಇದೆ. ಸಾಧಕ ಹಿಂದಿನಂತೆಯೇ ಇಂದೂ ಮಾಡಬಲ್ಲ. ಎಲ್ಲಿ ಅವನ ಮನಸ್ಸು ಭಗವಂತನಿಗಾಗಿ ತೀವ್ರವಾಗಿ ತುಡಿಯುವುದೋ, ಅಲ್ಲಿ ಒಂದಲ್ಲ ಒಂದು ಮಾರ್ಗ ಗೋಚರವಾಗುವುದು. ಸುದ್ದಿಮಾಧ್ಯಮಗಳೋ, ಆಧುನಿಕ ಜೀವನದ ಸಂಕೀರ್ಣ ಸಮಸ್ಯೆಗಳೋ ಅಥವಾ ಲೌಕಿಕ-ಕೌಟುಂಬಿಕ ವ್ಯವಹಾರಗಳೋ ಅಲ್ಲಿ ಕಾಲಿಡಲಾರವು. ಅದೇ ಪ್ರಪಂಚ, ಅದೇ ಕುಟುಂಬ, ಅದೇ ಸಮಸ್ಯೆಗಳು ಈಗಲೂ ಇದ್ದೇ ಇರುವುವು; ಆದರೆ ವ್ಯಕ್ತಿ ಬದಲಾಗಿರುವುದರಿಂದ ಅವನಿಗೆ ಎಲ್ಲಡೆ ಭಗವಂತನ ಲೀಲೆ ಮಾತ್ರ ಕಾಣಿಸುವುದು. ಆದ್ದರಿಂದ ಸಾಧಕನಿಗೆ ಎಷ್ಟರಮಟ್ಟಿಗೆ ಭಗವಂತ

ಬೇಕಾಗಿದ್ದಾನೆ ಎಂಬುದೇ ಇಲ್ಲಿ ನಿರ್ಣಾಯಕವಾದ ಸಂಗತಿಯಾಗಿದೆ.

### ಮರಣಭಯ – ಅಮೃತತ್ವ

ಹುಟ್ಟಿದ ಜೀವಿಗಳಲ್ಲೆಲ್ಲ ಮರಣಭಯವೆಂಬುದು ಮೂಲಭೂತ ಪ್ರವೃತ್ತಿ (instinct) ಯಾಗಿರುತ್ತದೆ. ಇದನ್ನು *ಪಾತಂಜಲ ಯೋಗಸೂತ್ರ*ವು 'ಅಭಿನಿವೇಶ'ವೆಂದು ಕರೆಯುತ್ತದೆ. ಎಲ್ಲ ಭಯಗಳ ಮೂಲ ಇದೇ ಆಗಿದೆ; ಹುಟ್ಟಿದಂದಿನಿಂದ ಸಾವಿನ ತನಕವೂ ಈ ಭಯ ವ್ಯಾಪಕವಾಗಿರುತ್ತದೆ. ಸನ್ನಿವೇಶದ ಬಲದಿಂದ ಇದು ಪ್ರಕಾಶಕ್ಕೆ ಬರುವುದು, ಆದರೆ ಮಾನವನ ಎಲ್ಲ ವ್ಯವಹಾರಗಳ ಹಿಂದೆ ಈ ಭಯ ಅಡಗಿರುತ್ತದೆ. ಈ ಸ್ಥಾಯೀ ರೂಪದ ಭಯದೊಂದಿಗೆ ಮರಣವನ್ನು ಗೆಲ್ಲುವ, ಎಲ್ಲ ಮಿತಿಗಳನ್ನೂ ಮೆಟ್ಟಿ ನಿಂತು ಅಮರನಾಗುವ ಬಯಕೆ ಮಾನವನಲ್ಲಿ ಅಷ್ಟೇ ಪ್ರಬಲವಾಗಿ ಹುಟ್ಟಿಕೊಂಡಿರುವುದೂ ಸತ್ಯ. ಎಲ್ಲ ಭಯಗಳ ಮೂಲವಾದ ಸಾವನ್ನು ಗೆಲ್ಲುವುದು ಸಾಧ್ಯವೆಂದು ಮೊತ್ತಮೊದಲು ಸಾರಿದ್ದು ಭಾರತದ ಋಷಿಗಳು: '**ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ಆವೃತ್ತ ಚಕ್ಷುಃ ಅಮೃತತ್ವಮಿಚ್ಛನ್**' *(ಕಠೋಪನಿಷತ್, ೨.೧.೧).* ಇದಕ್ಕೆ ಕಾರಣ, ಅವರು ಭಗವಂತನ ಹುಟ್ಟು–ಸಾವುಗಳಾಚೆಯ, ಅಮೃತಸ್ವರೂಪವನ್ನು ಕಂಡುಕೊಂಡದ್ದು, ಹಾಗೂ ತಾನು ಅದರಲ್ಲಿ ಒಂದಾಗಿರುವುದರಿಂದ ತಾನೂ ಅಮೃತಾತ್ಮನೇ ಎಂಬುದನ್ನು ಸಾಕ್ಷಾತ್ಕರಿಸಿಕೊಂಡದ್ದು. ಸಾಧನೆಯ ಮೂಲಕ ಯಾರೇ ಆದರೂ ಅಂಥ ಅವಸ್ಥೆಯನ್ನು ಹೊಂದಬಹುದು, ಭಗವಂತನಲ್ಲಿ ಒಂದಾಗಬಹುದು; ಇದೇ ನಿಜವಾದ ಮುಕ್ತಿ. ಹೀಗೆ ಸಾಕ್ಷಾತ್ಕಾರ ಹೊಂದಿದವರಿಗೆ ಮಾತ್ರ ಮರಣಭಯ ಇಲ್ಲದಾಗುವುದು ಎಂದು ನಮ್ಮಲ್ಲಿ ಪ್ರಾಚೀನ ಕಾಲದಿಂದಲೇ ಸಾರುತ್ತ ಬಂದರು. ನಮ್ಮಲ್ಲಿ ಸಾವನ್ನು ಮೀರುವ ಬಗೆ ಕೇವಲ ತತ್ತ್ವವಾಗದೆ, ಹಲವು ಮಂದಿ ಆಧ್ಯಾತ್ಮಿಕ ವೀರರ ಗುರಿಯೂ ಆಗಿಬಿಟ್ಟಿತು; ಮಾನವನ ಆಧ್ಯಾತ್ಮಿಕತೆಗೆ ಒಂದು ಪ್ರಬಲ ಕಾರಣವಾಯಿತು.

ಸಾಧಕನು ಮುಂದುವರೆದಂತೆಲ್ಲ ಅವನಿಗೆ ಭಗವಂತನಲ್ಲಿ ವಿಶ್ವಾಸ ಮತ್ತಷ್ಟು ಮತ್ತಷ್ಟು ದೃಢವಾಗುತ್ತ ಹೋಗುವುದು; ಅವನಿಗೆ ಭಗವಂತನ ಅಸ್ತಿತ್ವದಲ್ಲಿ ಸ್ವಲ್ಪವೂ ಸಂದೇಹವಿಲ್ಲದಂತೆ ಶ್ರದ್ಧೆ ಬಲಗೊಳ್ಳುವುದು. ಅವನು ಭಗವಂತನಲ್ಲಿಯೇ ಭರವಸೆಯನ್ನು ಹೊಂದುವನು, ಪ್ರತಿಯೊಂದು ಸಮಸ್ಯೆಗೂ ಭಗವಂತನಲ್ಲೇ ಉತ್ತರ ಕಂಡುಕೊಳ್ಳುವನು. ಅವನ ಆಂತರಿಕ ಜೀವನ ಬಲಗೊಂಡಂತೆ ಅವನು ಅಂತರ್ಮುಖನಾಗುತ್ತಾ ಹೋಗುತ್ತಾನೆ; ಲೌಕಿಕ ಜೀವನದಲ್ಲಿ ಆಸಕ್ತಿ ಕುಂದುತ್ತ ಹೋಗುವುದು. ತನಗೆ ಭಕ್ತಿ, ಮುಕ್ತಿ, ಅಮರತ್ವ, ಆನಂದ – ಎಲ್ಲವೂ ಭಗವಂತನಿಂದಲೇ ಲಭಿಸುವುದು ಎಂಬ ಸತ್ಯ ಗೋಚರವಾಗುವುದು. ಈ ಬಗೆಯ ಮನಃಸ್ಥಿತಿ ಹೊಂದುವವನು ಮಾನಸಿಕವಾಗಿಯೂ ದೈಹಿಕವಾಗಿಯೂ ಹೆಚ್ಚು ಆರೋಗ್ಯವಂತನಾಗುವುದೂ ಸಹಜ; ಅವನ ಬದುಕಿನಲ್ಲಿ ಆನಂದವೇ ಹರಿದಾಡಲಾರಂಭಿಸುವುದು. ಪ್ರಪಂಚ, ಸಂಸಾರ ಇನ್ನುಮೇಲೆ ಅವನಿಗೆ ಬಂಧನವಾಗಿ ಕಾಣಿಸದು; ಅದು ಆನಂದದ ಧಾಮವೆನಿಸುವುದು. ತನ್ನ ಮಡದಿ, ಮಕ್ಕಳು, ಸ್ನೇಹಿತರು, ಬಂಧುಗಳು ಇನ್ನುಮುಂದೆ ಪೀಡೆಯೆಂಬಂತೆ ಕಾಣಿಸಲಾರರು; ಭಗವಂತನ ಆವಿರ್ಭಾವವಾಗಿ ಕಾಣಿಸುವರು. ಎಲ್ಲಡೆ ಅವನು ಭಕ್ತಿಯ, ಆನಂದದ ಸವಿಯನ್ನು ಹಂಚುವನು. ಇದು ಸಾಧಕನ ಪರಿವರ್ತನೆ ಹೊಂದಿದ ದೃಷ್ಟಿಕೋನದ ಫಲ.

### ಪತಿತಪಾವನನ ಮಹಿಮೆ

ಭಕ್ತನ ಭರವಸೆಗೆ ಶಕ್ತಿ ದೊರಕುವುದು ಭಗವಂತನ 'ಪತಿತಪಾವನ' ಗುಣದಿಂದ. ಹಲವು ಸಂದರ್ಭಗಳಲ್ಲಿ, ಹಲವು ರೂಪಗಳಲ್ಲಿ ಆವಿರ್ಭವಿಸಿ ಮಾನವರಿಗೆ ದಿವ್ಯತೆಯ ದಾರಿಯನ್ನು ತೋರಿಸಿಕೊಟ್ಟ ಭಗವಂತನ ಅವತರಣವೇ ಈ ವಿಶಿಷ್ಟಗುಣವನ್ನು ಅತ್ಯುತ್ತಮವಾಗಿ ಬೆಳಗಿದ್ದನ್ನು ನಾವು ಕಾಣುತ್ತೇವೆ. ಎಲ್ಲರ ಬದುಕಿನಲ್ಲೂ ಅತ್ಯಂತ ಕಷ್ಟದಾಯಕವಾದ, ಸಂದಿಗ್ಧ ಪರಿಸ್ಥಿತಿ ಬರುತ್ತದೆ. ಅವುಗಳಿಂದ ಪಾರಾಗಲು ದಾರಿ ಕಾಣಿಸದಿದ್ದಾಗ ಭಗವಂತನಲ್ಲಿ ಮೊರೆಹೋಗುವುದು ಅತ್ಯಂತ ಸಹಜ. ಇಂತಹ ದುಃಖಿತರ, ಆರ್ತರ ಕಣ್ಣೀರನ್ನು ಒರೆಸಲು ಭಗವಂತನೇ ಮುಂದಾಗಿ ಬಂದ ಘಟನೆಗಳು ಹಲವಾರು; ಈ ಮಹಿಮೆಯ ಕಥೆಗಳು ಭಕ್ತನಿಗೆ ಧೈರ್ಯ ತುಂಬುತ್ತವೆ. ಪ್ರಪಂಚದ ಕಷ್ಟಕೋಟಲೆಗಳಿಂದ ನೊಂದು ಬೆಂದು ಬಳಲಿ ಬೆಂಡಾದ ಮಾನವನು ಭಗವಂತನಲ್ಲಿ ಶರಣಾಗತನಾಗುವುದು, ಭಗವಂತನ ನಿತ್ಯ ಸತ್ಯಸ್ವರೂಪದಲ್ಲಿ ತಲ್ಲೀನನಾಗಿರುವುದು, ಅವನ ಬದುಕಿನಲ್ಲಿ ಒಂದು ಹೊಸ ಧೈರ್ಯವನ್ನು ತುಂಬಲು ಕಾರಣವಾಗುವುದು. ಭಗವಂತನೇ ಅವನಿಗೆ ಅಗತ್ಯವಾದ ತ್ಯಾಗ, ವೈರಾಗ್ಯ, ಭಕ್ತಿ, ವಿವೇಕಗಳನ್ನು ತುಂಬಿ, ಅವನನ್ನು ತನ್ನಡೆಗೆ ಸೆಳೆದೊಯ್ಯುವನು. ಇದರಿಂದ ಭಕ್ತನು ಇನ್ನುಮುಂದೆ ಪ್ರಾಪಂಚಿಕ ಕಷ್ಟಕೋಟಲೆಗಳಿಂದ ದುಃಖಿಸದೆ, ಅವೆಲ್ಲವೂ ಭಗವಂತನ ಪರೀಕ್ಷೆಯೆಂದೇ ಭಾವಿಸುವನು. ಸಂಸಾರದ ಅನಿತ್ಯತೆ, ಅದನ್ನು ಮೀರಿರುವ ಭಗವಂತನ ಅಸೀಮ ಭಾವಸಾಮ್ರಾಜ್ಯ, ನಿರಂತರ ದಿವ್ಯತೆಯನ್ನು ಪ್ರವಹಿಸುವ ಭಗವಂತನ ಮಹಿಮೆ ಭಕ್ತನ ಮನದ ಆಳದಲ್ಲಿ ಸ್ಥಿರವಾಗಿ ನೆಲೆನಿಲ್ಲುವುದು. ಹೀಗೆ ಅವನು ಭಗವಂತನನ್ನು ವಿವಿಧ ಬಗೆಗಳಿಂದ ಕೊಂಡಾಡುತ್ತಾ, ಅವನ ದಿವ್ಯ ಲೀಲೆಯನ್ನೇ ಮನನ ಮಾಡುತ್ತಾ ಭಕ್ತಿರಸದಲ್ಲಿ ಮುಳುಗೇಳುವನು. ಸಂಪೂರ್ಣ ಭಾವುಕತೆಯ, ಉನ್ಮಾದದ, ಕಾಲ್ಪನಿಕತೆಯ ಅತಿರೇಕವೆಂದು ಅನ್ನಿಸಬಹುದಾದರೂ, ಭಕ್ತನ ಭಾವಾಂತರಗಳಿಗೆ ಒಂದು ಖಚಿತವಾದ ತಾತ್ತ್ವಿಕ ಹಿನ್ನೆಲೆಯಿದೆ. ಅಂತೆಯೇ ನೈತಿಕ, ಆಧ್ಯಾತ್ಮಿಕ ಶಕ್ತಿಯಿಂದ ಲಭಿಸುವ ಮಾನಸಿಕ–ದೈಹಿಕ ಆರೋಗ್ಯವು ಅವನ ಬದುಕಿಗೆ ಒಂದು ನೂತನ ಮಾರ್ಗವಾಗಿ ಪರಿಣಮಿಸುವುದು.

ಐತಿಹಾಸಿಕ, ಪೌರಾಣಿಕ ದೇವತೆಗಳಾದ ರಾಮ, ಕೃಷ್ಣ, ಶಿವ, ಶ್ರೀದುರ್ಗೆಯರಂತೆಯೇ ಬುದ್ಧ, ಶಂಕರ, ಚೈತನ್ಯ, ಶ್ರೀರಾಮಕೃಷ್ಣರಂಥ ಸಂತ–ಮಹಾತ್ಮರುಗಳಲ್ಲೂ 'ಪತಿತಪಾವನ' ಗುಣವನ್ನು ಕಾಣುತ್ತೇವೆ. ಯಾರು ಭಗವಂತನ ದಿವ್ಯತೆಯನ್ನು ಅನು

ಭವಿಸುವರೋ, ಅವರಲ್ಲಿ ಭಗವಂತನೇ ವ್ಯಕ್ತವಾಗುವುದರಿಂದ, ಸಾಕ್ಷಾತ್ಕಾರ ಹೊಂದಿದ ಮಹಾತ್ಮರನ್ನು ಕಂಡರೆ ದೇವರನ್ನೇ ಕಂಡಂತೆ. ಅಂಥವರ ಜೊತೆಗೆ ಒಡನಾಡಿದ ಅನೇಕಾನೇಕ ವ್ಯಕ್ತಿಗಳು ಅವರ 'ಪತಿತಪಾವನ' ಗುಣದಿಂದಾಗಿ ಪುನೀತರಾದರು; ಭಗವಂತನ ಅವ್ಯಾಜ ಕರುಣೆಗೆ ಸಾಕ್ಷಿಯಾಗಿ ನಿಂತರು. ಶ್ರೀರಾಮನಲ್ಲಿ ಗುಹ, ಶಬರಿ ಮುಂತಾದವರು; ಶ್ರೀಕೃಷ್ಣನಲ್ಲಿ ಅಕ್ರೂರ, ವಿದುರ, ಸುದಾಮ ಮುಂತಾದವರು; ಚೈತನ್ಯನಲ್ಲಿ ಜಗಾಯ್-ಮಧಾಯ್ ಮೊದಲಾದವರು ಹೀಗೆ ಶರಣಾದರು; ಭಗವಂತನ ದಿವ್ಯಸ್ಪರ್ಶವನ್ನು ಹೊಂದಿ ಪಾವನರಾದರು.

### ಗಿರೀಶನ ಶರಣಾಗತಿ

ಶ್ರೀರಾಮಕೃಷ್ಣರ ಬಳಿಗೆ ಬಂದ ಹಲವು ಮಂದಿ ಭಕ್ತರೂ ಇದೇ ರೀತಿ ಅವರ ದಿವ್ಯವ್ಯಕ್ತಿತ್ವದ ಸ್ಪರ್ಶದಿಂದ ಪರಿವರ್ತನೆ ಹೊಂದಿದರು. ಅವತಾರ ಪುರುಷರೆಂದೇ ಭಾವಿಸಲಾಗುವ ಶ್ರೀಮಾತೆ ಹಾಗೂ ಸ್ವಾಮಿ ವಿವೇಕಾನಂದರು ಮಾತ್ರವಲ್ಲದೆ, ಅವರ ಇನ್ನಿತರ ಸಂನ್ಯಾಸೀ ಶಿಷ್ಯರುಗಳು, ನಾಗಮಹಾಶಯ, ಬಲರಾಮ ಬಸು ಇವರಂಥ ಅತ್ಯುನ್ನತ ದರ್ಜೆಯ ಸಾಧಕರು, ಇನ್ನಿತರ ಹಲವು ಮಂದಿ ಗೃಹೀಭಕ್ತರು ಶ್ರೀರಾಮಕೃಷ್ಣರ ಬಳಿಗೆ ಬಂದು ಅವರ ಕೃಪೆಗೆ ಪಾತ್ರರಾದರು. ಅವರಲ್ಲೆಲ್ಲ ವಿಶಿಷ್ಟ ವ್ಯಕ್ತಿತ್ವದ ಹಾಗೂ ಅಸಾಧಾರಣ ರೀತಿಯಲ್ಲಿ ಪತನದ ಪರಾಕಾಷ್ಠೆಯಿಂದ ಪಾರಾಗಿ, ಅತಿಶ್ರೇಷ್ಠ ಭಕ್ತನ ನೆಲೆಗೇರಿದ ಕಥೆ – ಬಂಗಾಳದ ಪ್ರಸಿದ್ಧ ನಾಟಕಕಾರನಾದ ಗಿರೀಶಚಂದ್ರ ಘೋಷ್‌ನದು. ಸನ್ನಿವೇಶದ ಬಲದಿಂದಲೋ, ಸಂಸ್ಕಾರಗಳ ಕಾರಣಗಳಿಂದಲೋ ಗಿರೀಶನು ಅತ್ಯಂತ ಹೀನವಾದ ದುರ್ವ್ಯಸನಗಳಿಗೆ ಬಲಿಯಾಗಿದ್ದ. ಆದರೆ ಶ್ರೀರಾಮಕೃಷ್ಣರ ಮೇಲಿನ ದೃಢವಿಶ್ವಾಸ, ಭಕ್ತಿ, ಶರಣಾಗತಿಯಿಂದ ಅವನು ಎಲ್ಲ ಪಾಪಗಳಿಂದಲೂ ಮುಕ್ತನಾದ. ಅವನ ಶರಣಾಗತಿಯೇ ಒಂದು ದೊಡ್ಡ ದಂತಕತೆಯಾಗಿದೆ. 'ಕಡೇಪಕ್ಷ ದಿನದಲ್ಲಿ ಒಂದು ಕ್ಷಣವಾದರೂ ಭಗವಂತನ ಚಿಂತನೆ ಮಾಡು' ಎಂದು ಶ್ರೀರಾಮಕೃಷ್ಣರು ಅವನಿಗೆ ಉಪದೇಶಿಸಿದರೆ, 'ನನ್ನ ಈಗಿನ ಪರಿಸ್ಥಿತಿಯಲ್ಲಿ ಅದೂ ಅಸಾಧ್ಯ' ಎಂದನಂತೆ ಗಿರೀಶ. ಆಗ ಶ್ರೀರಾಮಕೃಷ್ಣರು, 'ಹಾಗಾದರೆ ನಿನ್ನ ವಕಾಲತ್ತನ್ನು ನನಗೇ ವಹಿಸಿಬಿಡು' ಎಂದರಂತೆ. ಹೀಗೆ 'ವಕಾಲತ್ತನ್ನು (power of attorney) ವಹಿಸುವುದು' ಎಂದರೇನೆಂದು ಪೂರ್ಣವಾಗಿ ಅರ್ಥವಾಗದ ಗಿರೀಶನು 'ಆಗಲಿ' ಎಂದನಂತೆ. ಆ ಕ್ಷಣದಿಂದಲೇ ಅವನ ಬದುಕು ಸಂಪೂರ್ಣ ಬದಲಾಯಿತು. ಪ್ರತಿಯೊಂದು ನಿಮಿಷವೂ ಅವನು ಶ್ರೀರಾಮಕೃಷ್ಣರನ್ನೇ ಚಿಂತಿಸಬೇಕಾಯಿತು. ತಿನ್ನುವುದು, ಕುಡಿಯುವುದು, ಓಡಾಡುವುದು – ಹೀಗೆ ಪ್ರತಿ ಹಂತದದಲ್ಲೂ 'ಇದು ತನ್ನಿಚ್ಛೆಯೇ, ಭಗವಂತನ ಇಚ್ಛೆಯೆ? ನನ್ನೆಲ್ಲವನ್ನೂ ನಾನು ಒಪ್ಪಿಸಿಬಿಟ್ಟಾಗಿದೆಯಲ್ಲ?' ಎಂದು ಯೋಚಿಸದೆ ಬೇರೆ ದಾರಿ ಇರಲಿಲ್ಲ. ಹೀಗೆ ಕ್ರಮೇಣ ಅವನ ಮನಸ್ಸೆಲ್ಲ ಭಗವದಭಿಮುಖವಾಯಿತು. ಶರಣಾಗತಿಯ ನಿಜವಾದ ಅರ್ಥ ಇದು. ನಿಜವಾಗಿ ಭಗವಂತನಲ್ಲಿ ಶರಣಾದವನು ತನ್ನೆಲ್ಲವನ್ನೂ ಭಗವಂತನಿಗೆ ಅರ್ಪಿಸುವನು. ತನ್ನ ತನು, ಮನ, ಆತ್ಮಗಳೆಲ್ಲವನ್ನೂ ದೇವರಿಗೆ ಅರ್ಪಿಸಿದವನು ಸ್ವತಂತ್ರ ಇಚ್ಛೆಯನ್ನು ಹೇಗೆ ಹೊಂದಿರಲು ಸಾಧ್ಯ? ಪ್ರತಿಕ್ಷಣವೂ ಎದ್ದು ನಿಲ್ಲುವ 'ನಾನು', 'ನನ್ನದು' – ಈ ಭ್ರಮೆಯನ್ನು ಭಗವಂತನ ನಾಮ, ರೂಪ, ಗುಣಚಿಂತನೆಯಲ್ಲಿ ಲೀನವಾಗಿಸುವುದಲ್ಲದೆ ಮತ್ತೇನು ಮಾಡಲು ಸಾಧ್ಯ? ಇದೇ ನಿಜವಾದ ಶರಣಾಗತಿ, ನಿಜವಾದ ಸಾಧನೆ. ತನ್ನತನ, ಜೀವಬೋಧೆ ಸಂಪೂರ್ಣವಾಗಿ ಅಡಗಿದಾಗ ಕೇವಲ ಭಗವಂತನೊಬ್ಬನೇ ಉಳಿಯುವನು; ಇದನ್ನೇ '**ಪೂರ್ಣಮೇವಾವಶಿಷ್ಯತೇ**' ಎಂದು (ಪೂರ್ಣ ಮಾತ್ರವೇ ಉಳಿಯುವುದು) ಹೇಳಲಾಗಿದೆ. ''ನೀರಿನೊಳಗೆ ಮುಳುಗಿರುವ ಮಡಕೆಯನ್ನು ಒಡೆದಾಗ ಇನ್ನೇನು ಉಳಿಯುವುದು? ಕೇವಲ ನೀರು ಮಾತ್ರವಲ್ಲವೆ?'' ಎನ್ನುತ್ತಾರೆ ಶ್ರೀರಾಮಕೃಷ್ಣರು. ನಿಜ, ಅದೇ ಜೀವಾತ್ಮನ ನಿಜವಾದ ಗುರಿ. ❀

### ಯುವಚೇತನ



ಅಜ್ಞತೆಯೇ ಅಂಧಕಾರ. ಅದು ಎಲ್ಲವನ್ನೂ ಆವರಿಸಿಕೊಂಡಿರುವುದರಿಂದ ಎಲ್ಲ ಅದ್ಭುತವಾಗಿ ಕಾಣುತ್ತದೆ. ಜ್ಞಾನದ ಬೆಳಕಿನಿಂದ ಎಲ್ಲಾ ಸ್ಪಷ್ಟವಾದರೆ, ಆಗ ಯಾವುದರಲ್ಲಿಯೂ ಅದ್ಭುತವಿರುವುದಿಲ್ಲ. ಇಂಥ 'ಅಘಟನ ಘಟನ ಪಟೀಯಸಿ'ಯಾದ ಮಾಯೆ, ಅದೂ ಲುಪ್ತವಾಗಿಬಿಡುತ್ತದೆ. ಯಾವುದನ್ನು ತಿಳಿದುಕೊಂಡರೆ ಎಲ್ಲವೂ ತಿಳಿಯುತ್ತದೆಯೋ ಅದನ್ನು ತಿಳಿದುಕೊ – ಅದರ ವಿಚಾರವನ್ನು ಯೋಚಿಸು – ಆ ಆತ್ಮವು ಪ್ರತ್ಯಕ್ಷವಾದರೆ ಶಾಸ್ತ್ರಾರ್ಥವು ಕರತಾಮಲಕದ ಹಾಗೆ ಪ್ರತ್ಯಕ್ಷವಾಗುತ್ತದೆ. ಪುರಾತನ ಋಷಿಗಳಿಗೆ ಆಯಿತು, ನಮಗೆ ಆಗುವುದಿಲ್ಲವೆ? ನಾವೂ ಮನುಷ್ಯರೆ. ಒಂದು ಸಲ ಒಬ್ಬರ ಜೀವನದಲ್ಲಿ ಯಾವುದು ಆಗಿದೆಯೋ, ಪ್ರಯತ್ನಪಟ್ಟರೆ, ಅದು ಪುನಃ ಮತ್ತೊಬ್ಬರ ಜೀವನದಲ್ಲಿಯೂ ಅವಶ್ಯವಾಗಿ ಆಗಿಯೇ ಆಗುವುದು. ಯಾವುದು ಒಂದು ಸಲ ಆಗಿದೆಯೋ ಅದೇ ಪುನಃ ಪುನಃ ಆಗುತ್ತದೆ. ಆ ಆತ್ಮವು ಸರ್ವಪ್ರಾಣಿಗಳಿಗೂ ಸಮಾನವಾದದ್ದು. ಆದರೆ ಒಂದು ಪ್ರಾಣಿಗೂ ಮತ್ತೊಂದು ಪ್ರಾಣಿಗೂ ಅದರ ವಿಕಾಸದಲ್ಲಿ ತಾರತಮ್ಯವಿರುತ್ತದೆ, ಅಷ್ಟೆ. ಈ ಆತ್ಮನನ್ನು ವಿಕಾಸಗೊಳಿಸಿಕೊಳ್ಳುವ ಯತ್ನ ಮಾಡು. ಆಗ ನೋಡುವೆ, ಬುದ್ಧಿಯು ಎಲ್ಲ ವಿಷಯಗಳಲ್ಲಿಯೂ ಪ್ರವೇಶಿಸುತ್ತದೆ. ಆತ್ಮವನ್ನರಿಯದವನ ಬುದ್ಧಿ ಏಕದರ್ಶಿನಿ. ಅವನು ಅಲ್ಪಸ್ವಲ್ಪವನ್ನು ತಿಳಿಯಬಲ್ಲ; ಆತ್ಮವನ್ನರಿತವನ ಬುದ್ಧಿಯು ಸರ್ವಗ್ರಾಸಿನಿ – ಎಲ್ಲವನ್ನೂ ವ್ಯಾಪಿಸಬಲ್ಲ. ಆತ್ಮ ಪ್ರಕಾಶವಾದರೆ, ದರ್ಶನ, ವಿಜ್ಞಾನ ಎಲ್ಲಾ ಅಧೀನವಾಗಿ ಬಿಡುವುದೆಂಬುದನ್ನು ನೋಡುವೆ. ಸಿಂಹಗರ್ಜನೆಯಂತೆ ಆತ್ಮದ ಮಹಿಮೆಯನ್ನು ಉದ್ಘೋಷಿಸು. ಜೀವಿಗಳಿಗೆ ಅಭಯವನ್ನು ಕೊಟ್ಟು ಹೀಗೆಂದು ಹೇಳು – '**ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ.**' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ. ೮, ಪು. ೧೧೨)*

# ಏಕಾಂತವಾಸ

* ಸಂಸಾರದಲ್ಲಿರುವವರೂ ಒಮ್ಮೊಮ್ಮೆ ಹೋಗಿ ನಿರ್ಜನ ಪ್ರದೇಶದಲ್ಲಿ ವಾಸಮಾಡಬೇಕು. ಸಂಸಾರದ ಹೊಸಲು ದಾಟಿಹೋಗಿ ಒಬ್ಬನೇ ಹೊರಗೆ ಇದ್ದು ಕನಿಷ್ಠಪಕ್ಷ ಒಂದು ಮೂರು ದಿನಗಳಾದರೂ ಭಗವಂತನಿಗಾಗಿ ಅಳಲು ಸಾಧ್ಯವಾಗುವುದಾದರೆ ಅದೂ ಒಳ್ಳೆಯದೆ. ಹೋಗಲಿ, ಒಂದು ದಿನವಾದರೂ ಸರಿಯೆ, ವಿರಾಮ ಮಾಡಿಕೊಂಡು ನಿರ್ಜನ ಪ್ರದೇಶದಲ್ಲಿ ಆತನ ಚಿಂತನೆ ಮಾಡಲು ಸಾಧ್ಯವಾಗುವುದಾದರೆ ಅದೂ ಎಷ್ಟೋ ಒಳ್ಳೆಯದೆ. ಜನ ಹೆಂಡತಿ ಮಕ್ಕಳಿಗಾಗಿ ಕೊಡಗಟ್ಟಲೆ ಕಣ್ಣೀರು ಸುರಿಸುತ್ತಾರೆ. ಭಗವಂತನಿಗಾಗಿ ಯಾರು ಅಳುತ್ತಾರೆ ಹೇಳು? ಆಗಾಗ ನಿರ್ಜನಪ್ರದೇಶಕ್ಕೆ ಹೋಗಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಸಾಧನೆ ಮಾಡಬೇಕು. ಸಂಸಾರದಲ್ಲಿ ಕಾಲಿಟ್ಟು ಅದರ ವಿವಿಧ ಕರ್ಮಗಳಲ್ಲಿ ತೊಡಗಿರುವ ವ್ಯಕ್ತಿಗೆ ಭಗವಂತನಲ್ಲಿ ಮನಸ್ಸನ್ನು ಸ್ಥಿರವಾಗಿ ಇಡಬೇಕು ಎಂದರೆ ಮೊದಲು ಮೊದಲು ಅನೇಕ ವಿಘ್ನಗಳು ಬರುತ್ತವೆ. ಫುಟ್‌ಪಾತಿನ ಗಿಡ ಇನ್ನೂ ಸಸಿಯಾಗಿರುವಾಗ ಅದಕ್ಕೆ ಬೇಲಿ ಹಾಕದೆ ಇದ್ದರೆ ಆಡುಕುರಿಗಳು ತಿಂದುಬಿಡುತ್ತವೆ. ಗಿಡ ಸಸಿಯಾಗಿರುವಾಗ ಬೇಲಿ ಆವಶ್ಯಕ. ಬುಡ ದಪ್ಪವಾಯಿತು ಎಂದರೆ ಬೇಲಿಯ ಆವಶ್ಯಕತೆಯೇನೂ ಇರುವುದಿಲ್ಲ. ಆಗ ಆನೆಯನ್ನು ತಂದು ಕಟ್ಟಿದರೂ ಅದಕ್ಕೆ ಏನೂ ಆಗದು.

* ಕೆಲವು ಕಾಲ ನಿರ್ಜನಪ್ರದೇಶದಲ್ಲಿ ಇರಬೇಕು. ಅಜ್ಜಿಯನ್ನು ಮುಟ್ಟಿಬಿಟ್ಟರೆ ಇನ್ನು ಭಯಪಡಬೇಕಾಗೇನೂ ಇರುವುದಿಲ್ಲ. ಚಿನ್ನವಾಗಿಬಿಟ್ಟನಂತರ ಅದು ಎಲ್ಲಿ ಬಿದ್ದಿದ್ದರೆ ತಾನೆ ಏನು? ನಿರ್ಜನಪ್ರದೇಶದಲ್ಲಿದ್ದು ಭಕ್ತಿಯನ್ನು ಗಳಿಸಿಕೊಂಡುಬಿಟ್ಟರೆ, ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡುಬಿಟ್ಟರೆ, ಅನಂತರ ಸಂಸಾರದಲ್ಲೂ ಇರಬಹುದು.

* ನಿರ್ಜನಪ್ರದೇಶದಲ್ಲಿ ಭಗವಚ್ಚಿಂತನೆ, ಭಗವನ್ನಾಮ ಗುಣಕೀರ್ತನೆ ಮಾಡಬೇಕೆಂದು ಹೇಳುತ್ತೇನಲ್ಲ, ಏಕೆ ಗೊತ್ತೆ? ಸಂಸಾರದಲ್ಲೇ ಹಗಲೂ ಇರುಳೂ ವಾಸಿಸುತ್ತಿದ್ದರೆ, ಅಶಾಂತಿ ಇದ್ದೇ ಇರುತ್ತದೆ. ಒಂದು ಅಂಗೈಯಗಲದ ಜಮೀನಿಗಾಗಿ ಅಣ್ಣತಮ್ಮಂದಿರು ಒಬ್ಬರನ್ನೊಬ್ಬರು ಖೂನಿ ಮಾಡಿಬಿಡುವುದಕ್ಕೂ ಹೇಸದಿರುವುದನ್ನು ನೀನು ನೋಡಿಲ್ಲವೆ?

* ಶ್ರೀರಾಮಕೃಷ್ಣರು: ''ಸಂಸಾರದಲ್ಲಿದ್ದು ಸಾಧನೆಮಾಡುವುದು ಎಂದರೆ ಬಹಳ ಕಷ್ಟ. ಅನೇಕ ಪ್ರತಿಕೂಲಗಳಿವೆ: ರೋಗ, ಶೋಕ, ದಾರಿದ್ರ್ಯ, ಹೆಂಡತಿಯೊಡನೆ ಒಮ್ಮನಸ್ಸಿಲ್ಲದಿರುವುದು, ಅವಿಧೇಯ, ಮೂರ್ಖ, ಹಠಮಾರಿ ಮಕ್ಕಳು ಹುಟ್ಟುವುದು ಇತ್ಯಾದಿ. ನಾನೇನೂ ನಿಮಗೆ ಇವುಗಳ ಪಟ್ಟಿಯನ್ನು ಕೊಡಬೇಕಾಗಿಲ್ಲ.

''ಆದರೂ ಮಾರ್ಗವಿದೆ. ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ ಭಗವಂತನಿಗೆ ಪ್ರಾರ್ಥನೆ ಸಲ್ಲಿಸಬೇಕು. ಆತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು ಪ್ರಯತ್ನ ಮಾಡಬೇಕು.''

ನೆರೆಯವ: ''ಮನೆ ಬಿಟ್ಟು ಹೊರಗೆ ಹೋಗಿ ಇರಬೇಕೆ?''

ಶ್ರೀರಾಮಕೃಷ್ಣರು: ''ಒಮ್ಮೆಗೇ ಏನಲ್ಲ. ಅವಕಾಶ ದೊರೆತಾಗ ಒಂದೋ ಎರಡೋ ದಿನದ ಮಟ್ಟಿಗೆ ಹೋಗಿ ನಿರ್ಜನಪ್ರದೇಶದಲ್ಲಿ ಇರಬೇಕು. ಆಗ ಹೊರಜಗತ್ತಿನೊಂದಿಗೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳಕೂಡದು. ಪ್ರಾಪಂಚಿಕರೊಡನೆ ಪ್ರಪಂಚದ ವಿಷಯವಾಗಿ ಒಂದು ಮಾತೂ ಆಡಕೂಡದು. ಸಾಧ್ಯವಾದರೆ ನಿರ್ಜನವಾಸ, ಇಲ್ಲದಿದ್ದರೆ ಸಾಧುಸಂಗ ಮಾಡುತ್ತಿರಬೇಕು.''

* ಸಂಸಾರದಲ್ಲಿ ನಿರ್ಲಿಪ್ತತೆಯಿಂದ ಇರಬೇಕಾದರೆ ಕಿಂಚಿತ್ ಸಾಧನೆಯನ್ನು ಮಾಡಲೇಬೇಕಾಗುತ್ತದೆ. ಸ್ವಲ್ಪ ಕಾಲವನ್ನು ನಿರ್ಜನಪ್ರದೇಶದಲ್ಲಿ ಕಳೆಯಬೇಕಾಗುತ್ತದೆ – ಒಂದು ವರ್ಷವನ್ನೊ, ಆರು ತಿಂಗಳನ್ನೊ, ಮೂರು ತಿಂಗಳನ್ನೊ, ಕೊನೆಗೆ ಒಂದು ತಿಂಗಳನ್ನಾದರೂ ಸರಿಯೆ. ಆ ಏಕಾಂತ ವಾಸದಲ್ಲಿ ಭಗವಂತನ ಕಡೆ ಮನಸ್ಸನ್ನು ತಿರುಗಿಸಿ, ಅತ್ಯಂತ ವ್ಯಾಕುಲಚಿತ್ತದಿಂದ ಆತನ ಪಾದಪದ್ಮಗಳಲ್ಲಿ ತನಗೆ ಭಕ್ತಿಯುಂಟಾಗುವಂತೆ ಆತನಿಗೆ ಸರ್ವದಾ ಪ್ರಾರ್ಥನೆ ಮಾಡಿಕೊಳ್ಳುತ್ತಿರಬೇಕು. ಮನಸ್ಸಿನಲ್ಲೇ ಹೇಳಿಕೊಳ್ಳುತ್ತಿರಬೇಕು – 'ನನ್ನವರು ಎಂಬುವವರು ಈ ಸಂಸಾರದಲ್ಲಿ ಯಾರೂ ಇಲ್ಲ. ಭಗವಂತನೊಬ್ಬನೇ ಏಕಮಾತ್ರ ನನ್ನ ಸ್ವಂತದವ, ಆತನೇ ನನ್ನ ಸರ್ವಸ್ವ.'

* ಭಗವಂತನಿದ್ದಾನೆ ಎಂದು ಸುಮ್ಮನೆ ಕೈಕಟ್ಟಿ ಕುಳಿತಿದ್ದರೆ ಆಗದು. ಹೇಗೊ ಮಾಡಿ ಆತನ ಹತ್ತಿರ ಹೋಗಬೇಕು. ಏಕಾಂತ ಸ್ಥಳದಲ್ಲಿ ಆತನನ್ನು ಕರೆ, ಆತನನ್ನು ಪ್ರಾರ್ಥನೆಮಾಡು, 'ನನಗೆ ನಿನ್ನ ದರ್ಶನ ಕೊಡು' ಅಂತ ವ್ಯಾಕುಲನಾಗಿ ಅಳು. ಕಾಮಕಾಂಚನಕ್ಕಾಗಿ ಹುಚ್ಚನ ಹಾಗೆ ಅಲೆಯಲು ಸಿದ್ಧನಾಗಿದ್ದೀಯೆ! ಈಗ ಭಗವಂತನಿಗಾಗಿ ಸ್ವಲ್ಪ ಹುಚ್ಚನಾಗು. ಜನ ಹೇಳಿಕೊಳ್ಳಲಿ, ಭಗವಂತನಿಗಾಗಿ ಆತ ಹುಚ್ಚನಾಗಿಬಿಟ್ಟ ಅಂತ. ಒಂದೆರಡು ದಿನಗಳ ಮಟ್ಟಿಗಾದರೂ ಎಲ್ಲವನ್ನೂ ತ್ಯಜಿಸಿ ಆತನನ್ನು ಏಕಾಂತದಲ್ಲಿ ಕರೆ.

ಶ್ರೀರಾಮಕೃಷ್ಣ ವಚನವೇದದಿಂದ

# 'ಶ್ರೀಮಾತೆ'ಯವರು : ಸ್ವಾಮಿ ಬ್ರಹ್ಮಾನಂದರ ದೃಷ್ಟಿಯಲ್ಲಿ

ಸಂಕಲನ: **ಸ್ವಾಮಿ ಪೂರ್ಣಾತ್ಮಾನಂದ**

ಅನುವಾದ : **ಸ್ವಾಮಿ ಮಂಗಳಾತ್ಮಾನಂದ**

ಶ್ರೀರಾಮಕೃಷ್ಣರ ಮಾನಸಪುತ್ರರೆಂದೇ ಖ್ಯಾತರಾದ ಸ್ವಾಮಿ ಬ್ರಹ್ಮಾನಂದರು ಶ್ರೀಮಾತೆಯವರನ್ನು ಕಂಡ ಬಗೆಯನ್ನು ಕುರಿತ ಈ ಲೇಖನ, **'ಶತರೂಪೇ ಶಾರದಾ'** ಎಂಬ ಬಂಗಾಳಿ ಗ್ರಂಥದಲ್ಲಿ ಪ್ರಕಟವಾಗಿದೆ. ಲೇಖಕರು ರಾಮಕೃಷ್ಣ ಮಹಾಸಂಘದ ಬಂಗಾಳಿ ಮಾಸಪತ್ರಿಕೆ **'ಉದ್ಬೋಧನ'**ದ ಸಂಪಾದಕರಾಗಿದ್ದರು. ಪ್ರಸ್ತುತ **'ಸ್ವಾಮಿ ವಿವೇಕಾನಂದರ ನಿವಾಸ'**ದ ಅಧ್ಯಕ್ಷರಾಗಿರುವ ಅವರು ಬಂಗಾಳಿಯಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಅನುವಾದಕರು ಕನ್ನಡದಲ್ಲಿ ಅನೇಕ ಲೇಖನಗಳನ್ನು ಬರೆದಿದ್ದು, ಇಟಾನಗರ ರಾಮಕೃಷ್ಣ ಮಿಷನ್ನಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀರಾಮಕೃಷ್ಣ ಮಹಾಸಂಘದಲ್ಲಿ ಶ್ರೀಮಾತೆ, ಸ್ವಾಮಿ ವಿವೇಕಾನಂದರ ನಂತರದ ಸ್ಥಾನ ಸ್ವಾಮಿ ಬ್ರಹ್ಮಾನಂದರಿಗೆ.

ಶ್ರೀಮಾತೆಯವರ ಬಗ್ಗೆ ಸ್ವಾಮಿ ಬ್ರಹ್ಮಾನಂದರು ಮೊದಲು ಬರೆದದ್ದು ಕ್ರಿ.ಶ. ೧೮೯೦ರಲ್ಲಿ ; ಬೃಂದಾವನದಿಂದ ಶ್ರೀ ಬಲರಾಮ ಬಸುವಿಗೆ, ಪತ್ರದ ಮೂಲಕ. ಅವರು ಪತ್ರದಲ್ಲಿ ಬರೆಯುತ್ತಾರೆ: ''ಶ್ರೀಮಾತೆಯವರು ಶೀಘ್ರದಲ್ಲೇ ಗಯಾ ಧಾಮಕ್ಕೆ ಹೋಗಲಿದ್ದಾರೆ. ಅಲ್ಲಿಂದ ಬೇಲೂರು ಮಠಕ್ಕೆ ಹೋಗಿ, ಅಲ್ಲಿ ಕೆಲವು ದಿನ ತಂಗಲಿದ್ದಾರೆ. ನಿರಂಜನ (ಸ್ವಾಮಿ ನಿರಂಜನಾನಂದ) ಶ್ರೀಮಾತೆಗೆ ಭಕ್ತಿಪೂರ್ವಕ ಸೇವೆ ಮಾಡುತ್ತಿದ್ದಾನೆ. ನಾವೂ ಕೂಡ ಅವರಿಗೆ ಬಹಳ ಶ್ರದ್ಧೆಯಿಂದ ಸೇವೆ ಮಾಡಬೇಕು; ಅವರಿಗೆ ಯಾವುದೇ ರೀತಿಯ ಕಷ್ಟವಾಗಬಾರದು. ಅವರಿಗೆ ನನ್ನಿಂದ ಯಾವುದೇ ಬಗೆಯ ಸೇವೆ ಮಾಡಲಾಗಲಿಲ್ಲ – ಇದೇ ನನ್ನ ದೌರ್ಭಾಗ್ಯ. ಅವರ ಅಕೃತ್ರಿಮ ವಾತ್ಸಲ್ಯ ನಮ್ಮ ಮೇಲೆ ಸದಾ ಇದೆ. ಶ್ರೀಮಾತೆಯವರು ಗಂಗಾತೀರದಲ್ಲಿಯೇ ವಾಸಮಾಡಬೇಕು; ಮತ್ತು ದಿನಾ ಗಂಗಾಸ್ನಾನ ಮಾಡಬೇಕು – ಇದು ನಮ್ಮ ಇಚ್ಛೆ. ನಿರಂಜನ ಯಾವುದಾದರೂ ಸಮಸ್ಯೆಯಲ್ಲಿ ಅವರನ್ನು ಸಿಲುಕಿಸಬಹುದೇ ಎನ್ನುವ ಭಯ ನನಗೆ. ಏಕೆಂದರೆ ಶ್ರೀಮಾತೆಯವರು, ಗೊಂದಲಮಯ ವಾತಾವಾರಣದಲ್ಲಿ ಇರಬಯಸುವುದಿಲ್ಲ. ಅವರಿಗೆ ನನ್ನ ಅನಂತಾನಂತ ಪ್ರಣಾಮಗಳನ್ನು ತಿಳಿಸಿ. ಅವರಿಬ್ಬರ ಆಶೀರ್ವಾದ ನನಗೆ ಸದಾ ಇರಲಿ, ಮತ್ತು ಅವರ ಶ್ರೀಪಾದಪದ್ಮಗಳಲ್ಲಿ ನನಗೆ ಅಚಲ ಶ್ರದ್ಧಾಭಕ್ತಿಯುಂಟಾಗಲಿ ಎಂದು ಬೇಡುತ್ತಿದ್ದೇನೆಂದು ಹೇಳಿ.''

ಮೇಲೆ ಹೇಳಿದ ಒಂದು ವಾಕ್ಯವನ್ನು ನಾವು ವಿಶೇಷವಾಗಿ ಗಮನಿಸಬೇಕು. 'ಅವರಿಬ್ಬರು' ಎಂದರೆ ಶ್ರೀರಾಮಕೃಷ್ಣರು ಮತ್ತು ಶ್ರೀಮಾತೆಯವರು. ಸ್ವಾಮಿ ಬ್ರಹ್ಮಾನಂದಜಿಯವರು ಶ್ರೀರಾಮಕೃಷ್ಣ ಮತ್ತು ಶ್ರೀಮಾತೆಯವರನ್ನು ಅಭೇದ ರೂಪದಲ್ಲಿ ನೋಡುತ್ತಿದ್ದರು; ಅವರ ಶ್ರೀಪದ್ಮಗಳಲ್ಲಿ ಆತ್ಯಂತಿಕವಾದ, ಅಚಲ ಭಕ್ತಿ ಬರಲೆಂದು ಬೇಡುತ್ತಿದ್ದರು. ಈ ಶುದ್ಧವಾದ ಭಕ್ತಿ ಬರಲೆಂದು ಶ್ರೀಮಾತೆಯವರ ಹತ್ತಿರ ಬೇಡುವುದು ಅಸಾಧಾರಣ ವಿಚಾರ. ಇದು ಬರುವುದು ಅಂತರಂಗದಿಂದ. ಇದಕ್ಕೆ ಸಂಬಂಧಪಟ್ಟ ಹಾಗೆ ಸ್ವಾಮಿ ಬ್ರಹ್ಮಾನಂದರ ಉಪದೇಶವನ್ನು ಉದಾಹರಿಸಬಹುದಾಗಿದೆ: 'ಠಾಕೂರರ (ಶ್ರೀರಾಮಕೃಷ್ಣರ) ಕೃಪೆ ಬೇಕೆಂದಾದರೆ, ಮೊದಲು



ಶ್ರೀಮಾತೆಯವರನ್ನು ಪ್ರಸನ್ನಗೊಳಿಸಬೇಕು. ಶ್ರೀಮಾತೆಯವರನ್ನು ನೋಡಿದರೆ ಶ್ರೀಗುರುಮಹಾರಾಜರನ್ನು ನೋಡಿದ ಹಾಗೆ.'

ಕ್ರಿ.ಶ.೧೯೧೨ ನವೆಂಬರ್‌ನಲ್ಲಿ ಶ್ರೀಮಾತೆಯವರು ಕಾಶಿಯ 'ಲಕ್ಷ್ಮೀನಿವಾಸ'ದಲ್ಲಿದ್ದರು. ಸ್ವಾಮಿ ಬ್ರಹ್ಮಾನಂದರು ಕೂಡ ಆಗ ಕಾಶಿಯಲ್ಲಿ ವಾಸ ಮಾಡುತ್ತಿದ್ದರು. ಅವರು ಪ್ರತಿದಿನ 'ಲಕ್ಷ್ಮೀ ನಿವಾಸ'ಕ್ಕೆ ಬಂದು ಶ್ರೀಮಾತೆಯವರ ಆರೋಗ್ಯದ ಬಗ್ಗೆ ಗೋಲಾಪ್ ಮಾ ಬಳಿ ವಿಚಾರಿಸಿಕೊಂಡು ಹೋಗುತ್ತಿದ್ದರು. ಒಂದು ದಿನ ರಾಜಾ ಮಹಾರಾಜರು (ಸ್ವಾಮಿ ಬ್ರಹ್ಮಾನಂದರನ್ನು ಹೀಗೆ ಕರೆಯುತ್ತಿದ್ದರು) ಎಂದಿನಂತೆ ಬಂದು ಕೆಳಗಡೆ ನಿಂತಿದ್ದರು. ಗೋಲಾಪ್ ಮಾ ಮಹಡಿ ಮೇಲಿನ ಕೈಸಾಲೆಯಲ್ಲಿ ನಿಂತು ಕೇಳಿದರು: ''ರಾಖಾಲ, ಪ್ರಾರಂಭದಲ್ಲಿ ಶಕ್ತಿಪೂಜೆ ಏಕೆ ಮಾಡಬೇಕೆಂದು ಶ್ರೀಮಾತೆಯವರು ಕೇಳುತ್ತಿದ್ದಾರೆ.'' ರಾಜಾ ಮಹಾರಾಜರು, ''ಬ್ರಹ್ಮಜ್ಞಾನದ ಬೀಗದ ಕೈ ಇರುವುದು ತಾಯಿಯ ಕೈಯಲ್ಲಿ. ತಾಯಿ ಕೃಪೆಮಾಡಿ ಬಾಗಿಲು ತೆರೆಯದಿದ್ದರೆ, ಬೇರೆ ಯಾವ ದಾರಿಯೂ ಇಲ್ಲ'' ಎಂದು ಹೇಳಿ ಒಂದು ಭಜನೆ ಹಾಡಲಾರಂಭಿಸಿದರು:

ಶಂಕರೀ ಚರಣೇ ಮನ್ ಮಗ್ನ ಹೊಯೇ ರವುರೇ ।
ಮಗ್ನ ಹೊಯೇ ರವುರೇ, ಸಬ್ ಜಂತ್ರಣಾ ಏಡಾವುರೇ ॥
ಏ ತೀನ್ ಸಂಸಾರ್ ಮಿಥೇ, ಮಿಥೇ ಭ್ರಮಿಯೆ ಬೇಡಾವುರೇ ।
ಕುಲ ಕುಂಡಲಿನೀ ಬ್ರಹ್ಮಮಯೀ, ಅಂತರೇ ದಿಯಾವುರೇ ॥
ಕಮಲಾಕಾಂತೇರ ಬಾನಿ, ಶ್ಯಾಮಾಮಾಯೇರ್ ಗುಣ ಗಾವೊರೇ।
ಏ ತೋ ಸುಖೇರ್ ನದೀ ನಿರವಧಿ, ಧೀರೇ ಧೀರೇ ಭಾವೂರೇ ॥

ಭಜನೆಯನ್ನು ಹಾಡುತ್ತ ಅವರು ಭಾವೋನ್ಮಾದದಲ್ಲಿ ನರ್ತಿಸ ಲಾರಂಭಿಸಿದರು. ಭಜನೆ ಮುಗಿದ ಮೇಲೆ 'ಹೋ ಹೋ ಹೋ' ಎಂದು ಹೇಳುತ್ತ ತಕ್ಷಣ ಅಲ್ಲಿಂದ ಹೊರಟುಹೋದರು. ಶ್ರೀಮಾತೆಯವರು ರಾಜಾ ಮಹಾರಾಜರ ಈ ಅಭೂತಪೂರ್ವ ಭಾವ ಮತ್ತು ನರ್ತನವನ್ನು ನೋಡಿ ಅತ್ಯಂತ ಸಂತೋಷಗೊಂಡಿದ್ದರು. ಸ್ವಾಮಿ ಬ್ರಹ್ಮಾನಂದರ ದೃಷ್ಟಿಯಲ್ಲಿ ಶ್ರೀಮಾತೆಯವರೇ ಶಕ್ತಿರೂಪದಲ್ಲಿರುವ ಬ್ರಹ್ಮಮಯಿಯಾಗಿದ್ದರು.

ದುರ್ಗಾಪೂಜೆಯ ದಿನಗಳಲ್ಲಿ ಶ್ರೀಮಾತೆಯವರ ಚರಣ ಕಮಲಗಳಿಗೆ ಪುಷ್ಪಾಂಜಲಿ ಅರ್ಪಿಸಿ, ಅವರು ಪರಮಾನಂದವನ್ನು ಹೊಂದುಕೊಳ್ಳುತ್ತಿದ್ದರು. ರಾಮಕೃಷ್ಣ ಮಹಾಸಂಘದ ಅಧ್ಯಕ್ಷರಾಗಿದ್ದ ಅವರು ಒಂದು ಸಲ ದುರ್ಗಾಪೂಜೆಯ ಸಮಯದಲ್ಲಿ ಮಹಾಮಾತೆಯವರ ಚರಣಕಮಲಗಳಿಗೆ ನೂರ ಎಂಟು ತಾವರೆ ಹೂಗಳಿಂದ ಪುಷ್ಪಾಂಜಲಿ ಅರ್ಪಿಸಿದ್ದರು. ನವರಾತ್ರಿ ಪೂಜೆಯ ಕಾಲದಲ್ಲಿ ಕಾರಣಾಂತರದಿಂದ ಶ್ರೀಮಾತೆಯವರಿಗೆ ಬೇಲೂರು ಮಠಕ್ಕೆ ಬರಲಾಗದಿದ್ದಲ್ಲಿ, ಬ್ರಹ್ಮಾನಂದರಿಗೆ ಪೂಜೆ ಮಾಡಿದ ತೃಪ್ತಿ ಉಂಟಾಗುತ್ತಿರಲಿಲ್ಲ. ಇತರ ಸಂದರ್ಭಗಳಲ್ಲಿಯೂ ಶ್ರೀಮಾತೆಯವರು ಬೇಲೂರು ಮಠಕ್ಕೆ ಬರುವಾಗಲೆಲ್ಲ ರಾಜಾ ಮಹಾರಾಜರು ಪುಟ್ಟ ಹಸುಳೆಯಂತೆ ಕುಣಿದು ಕುಪ್ಪಳಿಸುತ್ತಿದ್ದರು. ಈ ಬಗ್ಗೆ ಸ್ವಾಮಿ ಅಮೃತಾನಂದರು ಒಂದು ವಿವರಣೆ ಕೊಟ್ಟಿದ್ದಾರೆ: ''ಒಂದು ಸಲ ಶ್ರೀರಾಮಕೃಷ್ಣರ ಜಯಂತಿಯ ಅಂಗವಾಗಿ ಆಚರಿಸುವ ಸಾರ್ವಜನಿಕ ಮಹೋತ್ಸವಕ್ಕೆ (public celebration) ಶ್ರೀಮಾತೆಯವರು ತನ್ನ ಭಕ್ತೆಯರೊಂದಿಗೆ ಬೇಲೂರು ಮಠಕ್ಕೆ ಬಂದಿದ್ದರು. ಬ್ರಹ್ಮಾನಂದಜಿಯವರು ಮುಖ್ಯದ್ವಾರದಲ್ಲಿ ನಿಂತು (ಆರೋಗ್ಯಭವನದ ಹತ್ತಿರ ಇರುವ ಗೇಟು) 'ಮಹಾಮಾಯೀ ಕೀ ಜೈ' ಎಂದು ಘೋಷಿಸುತ್ತ ಸ್ವಾಗತಿಸಿದರು. ಶ್ರೀಮಾತೆಯವರು ದೇವಸ್ಥಾನಕ್ಕೆ ಹೋಗಿ ಪ್ರಣಾಮ ಮಾಡಿ, ಹೊರಗೆ ಬಂದು ಮೆಟ್ಟಿಲ ಮೇಲೆ ನಿಂತಾಗ (ಹಳೆಯ ಮಂದಿರ), ಅವರನ್ನು ಅಲ್ಲಿಯೇ ನಿಲ್ಲಿಸಿ, ಸ್ವಾಮಿ ಬ್ರಹ್ಮಾನಂದರು ಅವರಿಗೆ ಪುಷ್ಪಾಂಜಲಿ ಅರ್ಪಿಸಿದರು. ಶ್ರೀಮಾತೆಯವರು ದಕ್ಷಿಣಾಭಿಮುಖವಾಗಿ ನಿಂತಿದ್ದರು. ಮಹಾರಾಜರ ದೇಹವೆಲ್ಲ ಭಾವಪೂರಿತವಾಗಿ ಕಂಪಿಸುತ್ತಿತ್ತು, ಹಾಗೂ ರೋಮಾಂಚನಗೊಂಡಿತ್ತು. ಅವರು ಕಂಪಿಸುವ ಕೈಗಳಿಂದ ಭಾವೋನ್ಮುಖರಾಗಿ ಗಂಟೆ ಬಾರಿಸುತ್ತ ದೀಪಾರತಿ ಬೆಳಗಿದರು.

''ಮಹಾರಾಜರ ಆದೇಶದಂತೆ, ಸಾಧುಗಳು ಮತ್ತು ಭಕ್ತರು ಇಬ್ಬದಿಗಳಲ್ಲೂ ಮೊಣಕಾಲೂರಿ, ಕೈಜೋಡಿಸಿ '**ಸರ್ವಮಂಗಲಮಾಂಗಲ್ಯೇ...**' ಇತ್ಯಾದಿ ಸ್ತುತಿ ಮಾಡಿದರು. ಅನಂತರ ಪುಷ್ಪಾಂಜಲಿ ಅರ್ಪಿಸಿ ಪ್ರಣಾಮ ಮಾಡಿದರು. ಈ ಸಂದರ್ಭದಲ್ಲಿ ಶ್ರೀಮಾತೆಯವರು ಚಿತ್ರಿತಪಟದಂತೆ ನಿಂತಿದ್ದರು. ಅವರ ಮುಖದ ಅವಗುಂಠನ ಕಿಂಚಿತ್ತು ಸರಿದಿತ್ತು. ಮಹಾರಾಜರು ಅಶ್ರುಪೂರ್ಣ ನಯನಗಳಿಂದ ಅವರ ಎದುರುಗಡೆ ಮೊಣಕಾಲೂರಿ, ಕೈಜೋಡಿಸಿ ಕುಳಿತಿದ್ದರು. ಆ ದಿನ ಬ್ರಹ್ಮಾನಂದಜಿಯವರ ದರ್ಶನ ಪಡೆಯಲು ಭಕ್ತರದು ಭಾರೀ ನೂಕುನುಗ್ಗಲು. ರಾಜಾ ಮಹಾರಾಜರು ಮೆಟ್ಟಿಲ ಮೇಲೆ ನಿಂತು ತಮ್ಮೆರಡೂ ಕೈಗಳಿಂದ ಜನರನ್ನು ತಡೆದು ಮೃದು ಮಾತಿನಿಂದ ಬೆವರಿಳಿಸುತ್ತ, 'ಇಲ್ಲ, ಸಾಧ್ಯವಿಲ್ಲ, ಬಿಡಲಾರೆ, ಅಮ್ಮನಿಗೆ ತೊಂದರೆ ಕೊಡಲು ಬಿಡಲಾರೆ' ಎನ್ನುತ್ತಿದ್ದರು. ಭಕ್ತರು ಅವರ ಮಾತನ್ನು ಕೇಳದೆ, ಒಬ್ಬರನ್ನೊಬ್ಬರು ತಳ್ಳುತ್ತ, ಒಳನುಗ್ಗಲು ಪ್ರಯತ್ನಮಾಡುತ್ತಿದ್ದರು. ಬ್ರಹ್ಮಾನಂದರು ಯಾರೆಂದು ಜನರಿಗೂ ತಿಳಿದಿರಲಿಲ್ಲ. ಅವರೇ ಮಠದ ಅಧ್ಯಕ್ಷರೆಂದು ನೆರೆದ ಜನರಿಗೆ ಪರಿಚಯಿಸಿದ ಮೇಲೆ, ಅವರು ಶಾಂತರಾದರು.''

ಕ್ರಿ.ಶ. ೧೯೧೧ರಲ್ಲಿ ಶ್ರೀಮಾತೆಯವರು ದಕ್ಷಿಣಭಾರತದ ತೀರ್ಥಯಾತ್ರೆಯನ್ನು ಮುಗಿಸಿ ಬೇಲೂರು ಮಠಕ್ಕೆ ಹಿಂದಿರುಗುವ ದಿನದಂದು ಬ್ರಹ್ಮಾನಂದರು ಅದಕ್ಕೋಸ್ಕರ ಮಠದಲ್ಲಿ ಒಂದು ಸಮಾರಂಭವನ್ನು ಏರ್ಪಡಿಸಿದ್ದರು. ಈ ಬಗ್ಗೆ ಸ್ವಾಮಿ ಗಂಭೀರಾನಂದರು ಬರೆಯುತ್ತಾರೆ: ''ಮಠದ ಪ್ರವೇಶದ್ವಾರದಲ್ಲಿ ಪೂರ್ಣಕುಂಭಗಳನ್ನು ಸ್ಥಾಪಿಸಿ ಬಾಳೆಯ ಗಿಡಗಳನ್ನು ನೆಡಲಾಗಿತ್ತು. ರಸ್ತೆಯ ಇಬ್ಬದಿಗಳಲ್ಲೂ ನೂರಾರು ಭಕ್ತರು ಕೈಜೋಡಿಸಿ ನಿಂತುಕೊಂಡಿದ್ದರು. ಶ್ರೀಮಾತೆಯವರು ಪ್ರವೇಶಿಸುತ್ತಿದ್ದಂತೆ ಕೆಲವು ಸಿಡಿಮದ್ದುಗಳನ್ನು ಸಿಡಿಸಲಾಯಿತು. ಶ್ರೀಮಾತೆಯವರು ನಡೆಯುತ್ತಿದ್ದಂತೆ, ನೆರೆದಿದ್ದ ಭಕ್ತರು ಕೂಡ ನಿಧಾನವಾಗಿ ಅವರ ಜೊತೆ ಸಾಗುತ್ತ '**ಸರ್ವಮಂಗಲಮಾಂಗಲ್ಯೇ...**' ಇತ್ಯಾದಿ ಸ್ತೋತ್ರಗಳೊಂದಿಗೆ ಮುಂದುವರಿದರು. ಶ್ರೀಮಾತೆಯವರನ್ನು ಯಾರೂ ಪಾದಮುಟ್ಟಿ ನಮಸ್ಕಾರ ಮಾಡಬಾರದೆಂದು ಸ್ವಾಮಿ ಬ್ರಹ್ಮಾನಂದರು ಆದೇಶಮಾಡಿದ್ದರು. ಶ್ರೀಮಾತೆಯವರನ್ನು ಒಂದು ಕೊಠಡಿಯಲ್ಲಿ ಕುಳ್ಳಿರಿಸಲಾಯಿತು. ಕೆಳಗಡೆ ತಾರಕ ಸ್ವರದಲ್ಲಿ ಕಾಲೀಕೀರ್ತನೆ ನಡೆಯುತ್ತಿತ್ತು.

''ಬ್ರಹ್ಮಾನಂದರು ಕಾಲೀಕೀರ್ತನೆ ಕೇಳಲು ಕುಳಿತಿದ್ದರು. ಅವರು ಭಾವಸ್ಥರಾಗಿ ಕೊರಡಿನಂತೆ ಕುಳಿತಿದ್ದರು; ಕೈಯಲ್ಲಿರುವ ಹುಕ್ಕಾ ಕೆಳಕ್ಕೆ ಬಿದ್ದಿತ್ತು. ಅವರ ದೇಹದಲ್ಲಿ ಬಾಹ್ಯಪ್ರಜ್ಞೆಯ ಲಕ್ಷಣಗಳೇ ಕಾಣಿಸುತ್ತಿರಲಿಲ್ಲ! ತುಂಬಾ ಹೊತ್ತು ಇದೇ ರೀತಿ ಕುಳಿತಿದ್ದುದರಿಂದ ಶ್ರೀಮಾತೆಯವರಿಗೆ ಈ ವಿಷಯವನ್ನು ತಿಳಿಸಲಾಯಿತು. ಶ್ರೀಮಾತೆಯವರು ಒಂದು ಮಂತ್ರವನ್ನು ಹೇಳಿ, 'ಇದನ್ನು ರಾಜನ ಕಿವಿಯಲ್ಲಿ ಹೇಳಿ' ಎಂದರು. ಅದರಿಂದ ಅದ್ಭುತವಾದ ಮಾರ್ಪಾಡು ಉಂಟಾಯಿತು. ಆ ಮಂತ್ರವನ್ನು ಕೇಳಿಸಿಕೊಂಡ ತಕ್ಷಣ ಅವರಿಗೆ ಬಾಹ್ಯಪ್ರಜ್ಞೆ ಬಂತು. ಅವರು

ಉತ್ಸಾಹಗೊಂಡು ಗಾಯಕ ವೃಂದದವರನ್ನು ಪ್ರೋತ್ಸಾಹಿಸುತ್ತ, 'ಮುಂದುವರೆಯಲಿ, ಮುಂದುವರೆಯಲಿ' ಎಂದರು.''

ಸ್ವಾಮಿ ಬ್ರಹ್ಮಾನಂದರ ಸೇವಕರೂ, ಮುಂದೆ ಶ್ರೀರಾಮಕೃಷ್ಣ ಮಠದ ಉಪಾಧ್ಯಕ್ಷರೂ ಆಗಿದ್ದ ಸ್ವಾಮಿ ನಿರ್ವಾಣಾನಂದರು ಇಂತಹದೇ ಒಂದು ಘಟನೆಯನ್ನು ಉಲ್ಲೇಖಿಸಿದ್ದಾರೆ. ''ಈ ಘಟನೆ ನಡೆದಿದ್ದು ಪರಮಹಂಸರ ಜಯಂತಿಯಂದು. ಶ್ರೀಮಾತೆಯವರು ಆ ದಿನ ಬೇಲೂರು ಮಠಕ್ಕೆ ಬರುವವರಿದ್ದರು. ಮಠದ ಗೇಟುಗಳನ್ನು ವಿಶೇಷವಾಗಿ ಅಲಂಕಾರ ಮಾಡಲಾಗಿತ್ತು. ಗೇಟಿನಿಂದ ಮಂದಿರದ ತನಕ ಕೆಂಪುಬಣ್ಣದ ಕಂಬಳಿಯನ್ನು ರಸ್ತೆಯ ಮೇಲೆ ಹಾಸಲಾಗಿತ್ತು. ಪ್ರವೇಶದ್ವಾರದ ಹತ್ತಿರ ಸ್ವಾಮಿ ಬ್ರಹ್ಮಾನಂದರು, ಸ್ವಾಮಿ ಶಾರದಾನಂದರು, ಸ್ವಾಮಿ ಪ್ರೇಮಾನಂದರು ಸಾಷ್ಟಾಂಗ ಪ್ರಣಾಮ ಮಾಡಿದರು. ಶ್ರೀಮಾತೆಯವರು ತನ್ನ ಸಹಾಯಕರೊಂದಿಗೆ ಗರ್ಭಗುಡಿಗೆ ಹೋದರು. ಗರ್ಭಗುಡಿಯ ಮೆಟ್ಟಿಲು ಹತ್ತುವ ಮೊದಲು ಮಹಾರಾಜರ ಆಣತಿಯಂತೆ ಶುಕುಲ್ ಮಹಾರಾಜರು (ಸ್ವಾಮಿ ಆತ್ಮಾನಂದರು) ಶ್ರೀಮಾತೆಯವರಿಗೆ ಆರತಿ ಬೆಳಗಿದರು. ಗುರುಮಹಾರಾಜರ ಜಯಂತಿಯಂದು ಶ್ರೀಮಾತೆಯವರ ಆಗಮನದಿಂದಾಗಿ, ಸ್ವಾಮಿ ಬ್ರಹ್ಮಾನಂದರು ಬಾಲಕನಂತೆ ಚಂಚಲಚಿತ್ತದಿಂದ ಅತ್ತಿಂದಿತ್ತ ಓಡಾಡುತ್ತಿದ್ದರು. ಆ ದಿನ ಆಂದೋಲ್‌ನ (ಬಂಗಾಳದಲ್ಲಿ ಒಂದು ಸ್ಥಳ) ಕಾಳೀಕೀರ್ತನ ಮಂಡಳಿಯಿಂದ ಕಾಳೀಕೀರ್ತನೆ ನಡೆಯುತ್ತಿತ್ತು. ಪ್ರೇಮಾನಂದರು ರಾಜಾ ಮಹಾರಾಜರನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿದರು. ಆಗ ಕೀರ್ತನೆ ಉನ್ನತ ಸ್ತರಕ್ಕೆ ಏರಿತ್ತು; ರಾಜಾ ಮಹಾರಾಜರಿಗೆ ಸುಮ್ಮನೆ ಕುಳಿತುಕೊಳ್ಳಲು ಆಗಲಿಲ್ಲ. ಅವರು ಎದ್ದು ಕೀರ್ತನೆಯ ತಾಳಕ್ಕೆ ತಕ್ಕಂತೆ ಮನೋಹರವಾಗಿ ನರ್ತನ ಮಾಡಲಾರಂಭಿಸಿದರು. ಭಾವೋನ್ಮಾದದ ಅವಸ್ಥೆಯಲ್ಲಿ ತನ್ನನ್ನು ತಾನು ನಿಗ್ರಹಿಸಿಕೊಳ್ಳಲಾರದೆ, ಬೀಳಲಾರಂಭಿಸಿದುದನ್ನು ನೋಡಿ, ಶಾರದಾನಂದರು ಅವರನ್ನು ಹಿಡಿದು ಕುಳ್ಳಿರಿಸಿದರು. ಕುಳಿತುಕೊಂಡರೂ ಕೂಡ, ಭಾವಾವಸ್ಥೆಯಲ್ಲಿ ಅವರ ಶರೀರವು ತಾಳಕ್ಕೆ ತಕ್ಕಂತೆ ತೂಗುತ್ತಿತ್ತು. ಸೇವಕರು ಅವರನ್ನು ಅಲ್ಲಿಂದ ಒಂದು ಕೊಠಡಿಗೆ ಕರೆದುಕೊಂಡು ಹೋದರು. ಆದರೂ ಅವರು ಭಾವಾವಸ್ಥೆಯಿಂದ ಬಹಿರ್ಮುಖರಾಗದೆ, ಮರದ ದಿಮ್ಮಿಯಂತೆ ಅಲ್ಲಾಡದೆ ಕುಳಿತರು. ಅರ್ಧಘಂಟೆಯಾದರೂ ಬಾಹ್ಯಜ್ಞಾನದ ಚಿಹ್ನೆಗಳಿಲ್ಲದ್ದರಿಂದ, ಶ್ರೀಮಾತೆಗೆ ವಾರ್ತೆ ಮುಟ್ಟಿಸಿದರು. ಶ್ರೀಮಾತೆಯವರು ಸ್ವತಃ ಬ್ರಹ್ಮಾನಂದರಿದ್ದಲ್ಲಿಗೆ ಬಂದು, ಅವರ ದೇಹವನ್ನು ಅಲ್ಲಾಡಿಸಿ ಕೋಮಲ ಸ್ವರದಿಂದ, 'ಓ ರಾಖಾಲ, ಪ್ರಸಾದ ಕೊಟ್ಟಿದ್ದೇನೆ, ನೋಡು – ತಿನ್ನು' ಎಂದರು. ಮಹಾಮಾತೆಯವರ ಸ್ಪರ್ಶವು ಮಂತ್ರದಂತೆ ಕೆಲಸ ಮಾಡಿತು. ರಾಜಾಮಹಾರಾಜರು ನಿಧಾನವಾಗಿ ಕಣ್ಣು ತೆರೆದರು. ಅಲ್ಲಿ ಸ್ವಯಂ ಶ್ರೀಮಾತೆಯವರೇ ಎದುರು ನಿಂತಿದ್ದುದನ್ನು ನೋಡಿ, ಚಿಕ್ಕ ಬಾಲಕನಂತೆ ಥಂಗನೆ ಎದ್ದು, ಮಾತೆಯವರಿಗೆ ದಂಡವತ್ ಪ್ರಣಾಮ ಮಾಡಿದರು. ಶ್ರೀಮಾತೆಯವರು ಆಶೀರ್ವಾದ ಪೂರ್ವಕ ತಮ್ಮೆರಡು ಕೈಗಳನ್ನೂ ಬ್ರಹ್ಮಾನಂದ ಮಸ್ತಕದ ಮೇಲಿಟ್ಟರು. ಅನಂತರ ಹೇಳಿದರು, ''ಮಗೂ, ಸ್ವಲ್ಪ ಪ್ರಸಾದ ತಿನ್ನು.'' ''ಅಮ್ಮಾ, ನೋಡು – ಇದೋ, ತೆಗೆದುಕೊಂಡೆ'' ಎಂದು ರಾಜಾ ಮಹಾರಾಜರು ಹೇಳಿದುದನ್ನು ನೋಡಿ ಶ್ರೀಮಾತೆಯವರು ಅಲ್ಲಿಂದ ಹೊರಟುಹೋದರು. ಅನಂತರ ರಾಜಾ ಮಹಾರಾಜರು ಪ್ರಸಾದ ಸ್ವೀಕರಿಸಿದರು.''

ಸ್ವಾಮಿ ನಿರ್ವಾಣಾನಂದರು ಸ್ವಾಮಿ ಬ್ರಹ್ಮಾನಂದರ ಅತ್ಯಂತ ದೀರ್ಘಾವಧಿಯ ಸೇವಕರಾಗಿದ್ದುದರಿಂದ ಇಂತಹ ಬೇಕಾದಷ್ಟು ಘಟನೆಗಳನ್ನು ಉಲ್ಲೇಖಿಸಿದ್ದಾರೆ. ನಿರ್ವಾಣಾನಂದರು ಹೇಳುತ್ತಿದ್ದರು, ''ರಾಜಾ ಮಹಾರಾಜರಿಗೆ ಶ್ರೀಮಾತೆಯವರಲ್ಲಿ ಅತ್ಯಂತ ಶ್ರದ್ಧಾಭಕ್ತಿಗಳಿದ್ದವು. ಅವುಗಳನ್ನು ಶಬ್ದಗಳಲ್ಲಿ ಬರೆಯಲು ಸಾಧ್ಯವಿಲ್ಲ. ಇತರ ಶಿಷ್ಯರೂ ಕೂಡ ಶ್ರೀಮಾತೆಯವರಿಗೆ ಅತ್ಯಂತ ಶ್ರದ್ಧಾಭಕ್ತಿಗಳನ್ನು ತೋರಿಸುತ್ತಿದ್ದರು. ಇದೆಲ್ಲ ಜನ ಸಾಮಾನ್ಯರಿಗೆ ಅರ್ಥವಾಗುವುದೂ ಇಲ್ಲ , ಅರ್ಥೈಸಲೂ ಸಾಧ್ಯವಿಲ್ಲ. ಬ್ರಹ್ಮಾನಂದರು ಶ್ರೀಮಾತೆಯವರ ಬಳಿಗೆ ಬಹಳ ಕಡಿಮೆ ಹೋಗುತ್ತಿದ್ದರು. ಕಾರಣ, ಅವರ ಹತ್ತಿರ ಹೋದರೆ, ಅವರಿಗೆ ತಮ್ಮ ಭಾವೋನ್ಮಾದವನ್ನು ನಿಯಂತ್ರಿಸಲು ಆಗುತ್ತಿರಲಿಲ್ಲ. ಶ್ರೀಮಾತೆಯವರನ್ನು ಕುರಿತು ಅವರು ಯಾರ ಹತ್ತಿರವೂ ಚರ್ಚಿಸುತ್ತಿರಲಿಲ್ಲ. ಪರಮಹಂಸರ ಶಿಷ್ಯರು ಶ್ರೀಮಾತೆಯವರನ್ನು ಸಾಮಾನ್ಯ ಗುರುಪತ್ನಿ ಎಂದು ನೋಡುತ್ತಿರಲಿಲ್ಲ. ಶ್ರೀಮಾತೆಯವರಲ್ಲಿ ಸಾಕ್ಷಾತ್ ಜಗಜ್ಜನನಿಯನ್ನೇ ನೋಡುತ್ತಿದ್ದರು. ಬ್ರಹ್ಮಾನಂದಜಿ ಹೇಳುತ್ತಿದ್ದರು, 'ಶ್ರೀಮಾತೆಯವರು ಸಾಕ್ಷಾತ್ ಜಗದಂಬೆ, ನರರೂಪಧಾರಿಣಿ ಭಗವತಿ, ಠಾಕೂರ್ ಮತ್ತು ಶ್ರೀಮಾತೆಯವರು ಅಭಿನ್ನರು.' ಒಂದು ಸಲ ಮಹಾರಾಜರ ನಿಕಟ ಭಕ್ತನೊಬ್ಬ ಪ್ರಶ್ನಿಸಿದ, 'ಮಹಾರಾಜ್', ಯಾರು ರಾಮನೋ, ಯಾರು ಕೃಷ್ಣನೋ ಅವರೇ ಶ್ರೀರಾಮಕೃಷ್ಣರಾಗಿದ್ದಾರೆ. ಹಾಗಿದ್ದರೆ ಶ್ರೀಮಾತೆಯಾರು?' ಎಂದು. ಅದಕ್ಕೆ ಮಹಾರಾಜರು, 'ರಾಮಕೃಷ್ಣರು ಹೇಗೋ ಹಾಗೆಯೇ ಶ್ರೀಮಾತೆಯವರು ಕೂಡ' ಎಂದು ಹೇಳಿ ಬಹು ಗಂಭೀರರಾದರು. ಆ ಭಕ್ತ ಒಂದೆರಡು ನಿಮಿಷ ಕುಳಿತು, ಮಾತನಾಡಲು ಧೈರ್ಯ ಸಾಲದೆ ಎದ್ದು ಹೊರಟು ಹೋದ. ಆ ಭಕ್ತನು ಅದನ್ನು ಎಷ್ಟು ಅರ್ಥ ಮಾಡಿಕೊಂಡನೋ, ಯಾರಿಗೂ ತಿಳಿಯದು. ಅನಂತರ ಆ ಭಕ್ತ ಯಾವತ್ತೂ ಬ್ರಹ್ಮಾನಂದರನ್ನು ಪ್ರಶ್ನಿಸುವುದನ್ನು ನಾವು ನೋಡಿಲ್ಲ.''

ಸ್ವಾಮಿ ಬ್ರಹ್ಮಾನಂದರು ಮತ್ತು ಶ್ರೀಮಾತೆಯವರ ನಡುವೆ, ತಾಯಿ ಮಗನ ಸಂಬಂಧ ಯಾವ ರೀತಿ ಇತ್ತೆಂದು, ಬ್ರಹ್ಮಾನಂದರ ಶಿಷ್ಯ ಸ್ವಾಮಿ ವಿಜಯಾನಂದರು ಬಹು ಮರ್ಮಸ್ಪರ್ಶಿಯಾಗಿ ವಿವರಿಸಿದ್ದಾರೆ. ಸ್ವಾಮಿ ವಿಜಯಾನಂದರು ಅವರಿಬ್ಬರನ್ನೂ ಮೊದಲು ನೋಡಿದ್ದು ಹೌರಾ ರೈಲು ನಿಲ್ದಾಣದಲ್ಲಿ. ಈ ಘಟನೆಯನ್ನು ಅವರು ಹೀಗೆ ವಿವರಿಸಿದ್ದಾರೆ: ''ನಾನು ಸ್ವಾಮಿ

ಬ್ರಹ್ಮಾನಂದರ ವಿಚಾರವನ್ನು ಭಕ್ತರ ಮೂಲಕ ಬಹಳ ಕೇಳಿದ್ದೆ. ಹಾಗಾಗಿ ಅವರನ್ನು ಒಂದು ಸಲ ನೋಡಬೇಕೆಂದು ಬಹಳ ಉತ್ಸುಕನಾಗಿದ್ದೆ. ಒಂದು ದಿನ ಭಕ್ತರೊಬ್ಬರು ನನಗೆ ಹೇಳಿದರು, 'ನೀನು ಈ ದಿನ ಬೆಳಿಗ್ಗೆ ಒಂಬತ್ತರ ಹೊತ್ತಿಗೆ ಹೌರಾ ರೈಲು ನಿಲ್ದಾಣಕ್ಕೆ ಹೋದರೆ, ಸ್ವಾಮಿ ಬ್ರಹ್ಮಾನಂದರ ದರ್ಶನವಾಗುತ್ತದೆ. ಅವರು ಇಂದು ಭುವನೇಶ್ವರಕ್ಕೆ ಹೋಗುತ್ತಿದ್ದಾರೆ. ಇದನ್ನು ಕೇಳಿ ನಾನು ನೇರ ರೈಲು ನಿಲ್ದಾಣಕ್ಕೆ ಹೋಗಿ, ನಿರ್ದಿಷ್ಟವಾದ ಪ್ಲಾಟ್ ಫಾರ್ಮ್‌ಗೆ ಹೋದೆ. ಭುವನೇಶ್ವರದ ರೈಲು ಗಾಡಿ ಆಗಲೇ ಅಲ್ಲಿ ನಿಂತಿತ್ತು. ಅದರೊಳಗಿನಿಂದ ಅತ್ಯಂತ ಸ್ಥೂಲದೇಹಿಯಾದ, ತೇಜಸ್ವಿ ಹಾಗೂ ಗಂಭೀರ ಭಾವದ, ಹಿರಿಯ ಸಂನ್ಯಾಸಿಯೊಬ್ಬರು ಇಳಿದರು. ನೆರೆದ ಭಕ್ತರಿಂದ ತಿಳಿದುಕೊಂಡೆ, ಅವರೇ ಸ್ವಾಮಿ ಬ್ರಹ್ಮಾನಂದ ಮಹಾರಾಜರು ಎಂದು. ರೋಲ್ಸ್‌ರಾಯ್ಸ್ ಕಾರು, ಕೂಚು ಬಿಹಾರದ ಸಂಸ್ಥಾನದ ಮಹಾರಾಜರದು. ಸ್ವಾಮಿ ಬ್ರಹ್ಮಾನಂದರು ಇಳಿದು ನೇರ ತಮ್ಮ ರೈಲಿಗೆ ಹೋಗದೆ, ಪಕ್ಕದ ಪ್ಲಾಟ್ ಫಾರಮ್‌ನಲ್ಲಿ ನಿಂತಿದ್ದ ಇನ್ನೊಂದು ರೈಲುಗಾಡಿಯತ್ತ ಕೈ ಮುಗಿದುಕೊಂಡು ಹೋದರು. ಒಂದು ಬೋಗಿ ಎದುರು ಹೋಗಿ ಪ್ಲಾಟ್‌ಫಾರ್ಮ್ ಮೇಲೆ ಸಾಷ್ಟಾಂಗ ಪ್ರಣಾಮ ಮಾಡಿದರು. ಆ ಜಾಗವು ಸಹಸ್ರಾರು ಜನ ನಡೆದಾಡುತ್ತಿದ್ದುದರಿಂದ ಕೊಳಕಾಗಿತ್ತು. ಜನರೂ ಅತ್ತಿಂದಿತ್ತ ಓಡಾಡುತ್ತಿದ್ದರು. ಅವರು ಇದಾವುದನ್ನೂ ಗಮನಿಸಲೇ ಇಲ್ಲ! ಅನಂತರ ನೇರ ರೈಲು ಬೋಗಿಯ ಒಂದು ಕೋಣೆಗೆ ಹೋಗಿ, ಅಲ್ಲಿ ಒಬ್ಬರು ಮಹಿಳೆಯ ಎದುರು ಕೈಮುಗಿದುಕೊಂಡು ನಿಂತರು. ಆಗಲೇ ನನಗೆ ಗೊತ್ತಾಯಿತು, ಆ ಮಹಿಳೆ ಶ್ರೀಮಾತೆ ಶಾರದಾದೇವಿಯವರು ಎಂದು. ಅವರು ಜಯರಾಂಬಾಟಿಗೆ ಹೋಗುತ್ತಿದ್ದರು. ಇಬ್ಬರ ಗಾಡಿಗಳೂ ಸುಮಾರು ಒಂದೇ ಸಮಯಕ್ಕೆ ಚಲಿಸಬೇಕಿತ್ತು. ಶ್ರೀಮಾತೆಯವರನ್ನು ನಾನು ಅದೇ ಮೊದಲ ಬಾರಿಗೆ ನೋಡಿದ್ದು. ಶ್ರೀಮಾತೆಯವರ ಮುಖ ಅವಗುಂಠನದಿಂದ ಆವೃತವಾಗಿತ್ತು. ಬ್ರಹ್ಮಾನಂದರು ಕೈಜೋಡಿಸಿ ಹೇಳಿದರು, 'ಅಮ್ಮಾ ಭುವನೇಶ್ವರಕ್ಕೆ ಹೋಗುತ್ತಿದ್ದೇನೆ. ತಾವು ಒಂದು ಸಲ ಭುವನೇಶ್ವರ ಮಠಕ್ಕೆ ಬಂದು, ತಮ್ಮ ಚರಣಸ್ಪರ್ಶ ಮಾಡಬೇಕು.' ಶ್ರೀಮಾತೆಯವರು ಅವಗುಂಠನದೊಳಗಿಂದ ತಲೆ ಅಲ್ಲಾಡಿಸಿ, 'ಬಹಳ ಜೋಪಾನವಾಗಿ ಹೋಗಿ ಬಾ ಮಗು, ಅಲ್ಲಿ ಮಲೇರಿಯಾ ಬಹಳವಂತೆ, ಕುದಿಸಿದ ನೀರನ್ನೇ ಕುಡಿ' ಎಂದರು. ಶ್ರೀಮಾತೆಯವರ ರೈಲು ಹೊರಡುವ ಸಮಯವಾಯಿತು. ರಾಜಾ ಮಹಾರಾಜರು ಭಾವಸ್ಥರಾಗಿ, ಕೈ ಮುಗಿದು ಬೆನ್ನು ತೋರಿಸದೆ, ಹಿಂದುಹಿಂದಕ್ಕೆ ಬಂದು ರೈಲಿನಿಂದಿಳಿದು ಬಂದು, ಪುನಃ ಪ್ಲಾಟ್‌ಫಾರಂ ಮೇಲೆ ಮೊದಲಿನ ಹಾಗೆ ಇನ್ನೊಂದು ಬಾರಿ ಸಾಷ್ಟಾಂಗ ಪ್ರಣಾಮ ಮಾಡಿದರು. ಎದ್ದು ನಿಂತು, ಶ್ರೀಮಾತೆಯವರ ಗಾಡಿ ಚಲಿಸಿ ಮುಂದೆ ಹೋಗುವ ತನಕ ಹಾಗೆಯೇ ಸ್ತಬ್ಧರಾಗಿ ನಿಂತಿದ್ದರು. ಈ ಘಟನೆಯನ್ನು ನಾನು ನನ್ನ ಜೀವನದಲ್ಲಿ ಎಂದೂ ಮರೆಯಲಾರೆ.''

ಬ್ರಹ್ಮಾನಂದಜಿಯವರು ಶ್ರೀಮಾತೆಯವರ ಎದುರು ಹೆಚ್ಚು ಹೊತ್ತು ನಿಲ್ಲುತ್ತಿರಲಿಲ್ಲ. ನಿಂತರೆ ಭಾವೋನ್ಮತ್ತರಾಗುತ್ತಿದ್ದರು. ಶ್ರೀಮಾತೆಯವರಿಗೆ ತನ್ನಿಂದ ಯಾವುದೇ ಕಷ್ಟವಾಗಬಾರದೆಂಬ ಭಾವನೆ ಅವರಲ್ಲಿತ್ತು. ಈ ಬಗ್ಗೆ ಭಕ್ತರೊಬ್ಬರು ಬರೆಯುತ್ತಾರೆ: ''ಒಂದು ದಿನ ನಾನು 'ಉದ್ಬೋಧನ' (ಶ್ರೀಮಾತೆಯವರ ಮನೆ) ದಲ್ಲಿದ್ದೆ. ಮಹಾರಾಜರು ಅಲ್ಲಿಗೆ ಬಂದರು. ಅವರು ಬಂದ ವಾರ್ತೆಯನ್ನು ಕೇಳಿ, ಶ್ರೀಮಾತೆಯವರು ಮಹಡಿ ವರಾಂಡದ ಮೇಲೆ ಹೋಗಿ ನಿಂತರು. ಮಹಾರಾಜರು ಮೇಲೆ ಹೋಗಲಿಲ್ಲ, ಅವರ ಜೊತೆಗೆ ಸ್ವಾಮಿ ಶಾರದಾನಂದರು ಕೂಡ ಇದ್ದರು. ಬ್ರಹ್ಮಾನಂದರು ಮೆಟ್ಟಿಲ ಮೇಲೆ ನಿಂತು, ತಮ್ಮೆರಡೂ ಕೈಗಳನ್ನು ತಲೆಯ ಮೇಲೆ ಇಟ್ಟು, ಕೈಜೋಡಿಸಿ, ಮೇಲೆ ನೋಡದೆ, ಕಡೆದ ಮೂರ್ತಿಯಂತೆ ತುಂಬಾ ಹೊತ್ತು ನಿಂತಿದ್ದರು. ಇಡೀ ಮನೆಯೇ ಹಿಮಾಲಯದ ಹಾಗೆ ಗಂಭೀರವಾಯಿತೆಂದು ನನಗೆ ಅನ್ನಿಸಿತು.''

ಬ್ರಹ್ಮಾನಂದರು ಶ್ರೀಮಾತೆಯವರ ಎದುರುಗಡೆ ಬಾಲಕನ ಹಾಗೆ ಇರುತ್ತಿದ್ದರು; ತನ್ನನ್ನು ತಾನೇ ಮರೆಯುತ್ತಿದ್ದರು. ಹೇಗೋ ತನ್ನನ್ನು ತಾನು ನಿಯಂತ್ರಣದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದರು. ಈ ಬಗ್ಗೆ ಸ್ವಾಮಿ ವಾಸುದೇವಾನಂದರು ಬರೆಯುತ್ತಾರೆ: ''ಶ್ರೀಮಾತೆಯವರನ್ನು ನೋಡಲು ಬ್ರಹ್ಮಾನಂದರು ಉದ್ಬೋಧನಕ್ಕೆ ಹೋಗಿದ್ದರು. ಆಗ ಶ್ರೀಮಾತೆಯವರು ಜಯರಾಂಬಾಟಿಯಿಂದ ಕಲ್ಕತ್ತೆಗೆ ಬಂದಿದ್ದರು. ಬ್ರಹ್ಮಾನಂದರು ಚಿಕ್ಕ ಹಸುಳೆಯಂತೆ ಶ್ರೀಮಾತೆಯವರ ಕಾಲು ಹಿಡಿದು ಪ್ರಣಾಮ ಮಾಡಿ ಕೇಳಿದರು: 'ಅಮ್ಮಾ ಹೇಗಿದ್ದೀರಿ?' ಆಗ ಶ್ರೀಮಾತೆಯವರ ತಲೆಯ ಮೇಲೆ ಸೆರಗಿದ್ದರೂ, ಅವಗುಂಠನವಿರಲಿಲ್ಲ. ಅವರು ಹೇಳಿದರು, 'ಮಗೂ, ವಾತರೋಗದಿಂದ ಕಾಲುಗಳಲ್ಲಿ ನೋವಿದೆ, ತುಂಬಾ ಕಷ್ಟವಾಗುತ್ತದೆ. ಸ್ವಲ್ಪ ಜ್ವರ ಕೂಡಾ ಬರುತ್ತಿದೆ.' ಇದನ್ನು ಕೇಳಿ ರಾಜಾ ಮಹಾರಾಜರು ಒಂದೇ ಸಲ ಬಾಲಕನಂತೆ ಚಂಚಲರಾದರು. ಆ ಕಡೆ ಈ ಕಡೆ ಏನೋ ಹುಡುಕುವ ಹಾಗೆ ನೋಡಲಾರಂಭಿಸಿದರು. 'ಅಮ್ಮಾ, ತಮಗೆ ನಾನು ಹೋಮಿಯೋಪಥಿ ಔಷಧಿ ಕೊಡುತ್ತೇನೆ. ನಾನು ಹೋಮಿಯೋಪಥಿ ಬಗ್ಗೆ ಬೇಕಾದಷ್ಟು ಅಧ್ಯಯನ ಮಾಡಿದ್ದೇನೆ. ನನ್ನ ಹತ್ತಿರ ಔಷಧಿ ಇದೆ, ಕೊಡುತ್ತೇನೆ. ನೀವು ಹುಷಾರಾಗುತ್ತೀರಿ' ಎಂದು ಹೇಳಿ, ಪ್ರಣಾಮ ಮಾಡಿ ದಾಪುಗಾಲು ಹಾಕುತ್ತ ಕೆಳಗೆ ಹೋದರು.''

ಶ್ರೀರಾಮಕೃಷ್ಣರ ಇತರ ಶಿಷ್ಯರಂತೆ, ಸ್ವಾಮಿ ಬ್ರಹ್ಮಾನಂದರು ಕೂಡ ಶ್ರೀಮಾತೆ ಏನಾದರೂ ಹೇಳಿದರೆ, ತಕ್ಷಣವೇ ಅದನ್ನು ಪರಮ ಆದೇಶವೆಂದು ಪಾಲಿಸುತ್ತಿದ್ದರು. ಈ ಪ್ರಸಂಗಕ್ಕೆ ಒಂದು ಸ್ಮರಣೀಯವಾದ ಒಂದು ಘಟನೆಯನ್ನು ಉಲ್ಲೇಖಿಸಬಹುದು: ಒಂದು ಸಲ ಮಹಾರಾಜರನ್ನು ಢಾಕಾಗೆ ಕರೆದುಕೊಂಡು ಹೋಗಲು ಅಲ್ಲಿಂದ ವೀರೇಂದ್ರನಾಥ ಬಸು ಬೇಲೂರು ಮಠಕ್ಕೆ ಬಂದಿದ್ದರು. ಆದರೆ ಬ್ರಹ್ಮಾನಂದರು ಢಾಕಾಗೆ ಹೋಗಲು ತಯಾರಿರಲಿಲ್ಲ. ಯಾರು ಹೇಳಿದರೂ ಅವರು ಕೇಳುತ್ತಿರಲಿಲ್ಲ. ಸ್ವತಃ ಸ್ವಾಮಿ

ಪ್ರೇಮಾನಂದರೇ ವಿನಂತಿಸಿಕೊಂಡರೂ ಒಪ್ಪುತ್ತಿರಲಿಲ್ಲ. ಪ್ರೇಮಾನಂದರು ವೀರೇಂದ್ರನಾಥನಿಗೆ, 'ಇದು ನಮ್ಮಿಂದ ಆಗುವ ಕಾರ್ಯವಲ್ಲ. ನೀನು ಉದ್ಬೋಧನಕ್ಕೆ ಹೋಗಿ, ಶ್ರೀಮಾತೆಯವರನ್ನು ಬೇಡಿಕೋ. ಶ್ರೀಮಾತೆ ಅನುಮತಿ ಕೊಟ್ಟರೆ ಕಾರ್ಯ ಸಫಲವಾಗುತ್ತದೆ' ಎಂದರು. ಪ್ರೇಮಾನಂದರು ವೀರೇಂದ್ರನಾಥನನ್ನು ಕೃಷ್ಣಲಾಲ ಮಹಾರಾಜರ ಜೊತೆ 'ಉದ್ಬೋಧನ'ಕ್ಕೆ ಕಳುಹಿಸಿಕೊಟ್ಟರು.

ಕೃಷ್ಣಲಾಲ್ ಮಹಾರಾಜರು ಶ್ರೀಮಾತೆಗೆ, ''ಅಮ್ಮ, ಇವರು ರಾಜಾ ಮಹಾರಾಜರ ಶಿಷ್ಯ. ತನ್ನ ಗುರುಗಳನ್ನು ಢಾಕಾಗೆ ಕರೆದುಕೊಂಡು ಹೋಗಬೇಕೆಂದು ಇಲ್ಲಿಗೆ ಬಂದಿದ್ದಾರೆ. ಆದರೆ ಮಹಾರಾಜರು ಏನು ಮಾಡಿದರೂ ಹೋಗಲು ಒಪ್ಪುತ್ತಿಲ್ಲ'' ಎಂದರು. ಅದಕ್ಕೆ ಶ್ರೀಮಾತೆ, ''ಹುಡುಗ ಬಂದಿದ್ದಾನೆ, ಕರೆದುಕೊಂಡು ಹೋಗಲು. ಹೋಗಬಾರದೆ? ಆದರೆ ನೋಡು, ತುಂಬಾ ಜಾಗ್ರತೆಯಾಗಿ ಕರೆದುಕೊಂಡು ಹೋಗು'' ಎಂದರು. ವೀರೇಂದ್ರನಾಥರ ಕೆಲಸ ಸರಾಗವಾಯಿತು. ಶ್ರೀಮಾತೆಯವರ ಈ ಮಾತನ್ನು ಕೇಳಿ, ಮಹಾರಾಜರು ಚಕಾರವೆತ್ತದೆ ಢಾಕಾಗೆ ಹೋಗಲು ಅಣಿಯಾದರು.

ಸಂಘಜನನಿ ಶ್ರೀಮಾತೆಯವರ ಅನುಮತಿಯಿಲ್ಲದೆ ರಾಜಾ ಮಹಾರಾಜರು ಸಂಘದ ಕೆಲಸವಾಗಲಿ, ತನ್ನ ವೈಯಕ್ತಿಕ ಕೆಲಸವಾಗಲಿ, ಯಾವುದನ್ನೂ ಮಾಡುತ್ತಿರಲಿಲ್ಲ. ೧೮೯೮ರ ಅಂತ್ಯಭಾಗದಲ್ಲಿ ಬ್ರಹ್ಮಾನಂದರಿಗೆ ತಪಸ್ಸು ಮಾಡಲು ಹೋಗಬೇಕೆಂದು ಪ್ರಬಲವಾದ ಇಚ್ಛೆಯುಂಟಾಯಿತು. ಆಗ ಶ್ರೀಮಾತೆಯವರು ಜಯರಾಂಬಾಟಿಯಲ್ಲಿದ್ದರು. ಬ್ರಹ್ಮಾನಂದಜಿ ತನ್ನ ಇಚ್ಛೆಯನ್ನು ಶ್ರೀಮಾತೆಗೆ ತಿಳಿಸಿ, ಅವರ ಅನುಮತಿಗಾಗಿ ಕೇಳಿಕೊಂಡರು. ಈ ಬಗ್ಗೆ ಶ್ರೀಮಾತೆಯವರು ಬಲರಾಮಬಾಬುವಿಗೆ ಪತ್ರ ಬರೆದರು: ''ರಾಖಾಲ ಪಶ್ಚಿಮಕ್ಕೆ ಹೋಗಬೇಕೆಂದಿದ್ದಾನೆಂದು ಕೇಳಿದೆ. ಹೋದ ಸಲ ಪುರಿಗೆ ಹೋಗಿ ಶೀತದಿಂದ ತುಂಬಾ ಕಷ್ಟಪಟ್ಟಿದ್ದ. ಈ ಸಲ ಫಾಲ್ಗುಣ ತಿಂಗಳ ಕೊನೆಗೆ ಹೋದರೆ ಒಳಿತೆಂದು ಕಾಣುತ್ತದೆ. ಆಗ ಚಳಿ ಕಡಿಮೆಯಾಗುತ್ತದೆ. ಆದರೆ ಹೋಗಲೇಬೇಕೆಂದಿದ್ದರೆ, ನಾನೇನು ಹೇಳಬಲ್ಲೆ?'' ಶ್ರೀಮಾತೆಯ ಆದೇಶವನ್ನು ಶಿರಸಾವಹಿಸಿ, ವಿಳಂಬವಿಲ್ಲದೆ ಬ್ರಹ್ಮಾನಂದರು ತಪಸ್ಸಿಗೆ ಹೊರಟರು.

ಬಹುಶಃ ೧೮೯೮ರಲ್ಲಿರಬೇಕು, ಒಬ್ಬ ಗುರುಭಾಯಿಯ ಆರೋಗ್ಯ ಮತ್ತು ಆಧ್ಯಾತ್ಮ ಜೀವನದ ಬಗ್ಗೆ ಸ್ವಾಮಿ ಬ್ರಹ್ಮಾನಂದರು, ಅವರಿಗೆ ಬರೆಯಬೇಕಿತ್ತು. ಈ ಬಗ್ಗೆ ಯೋಗಾನಂದರ ಹತ್ತಿರ ವಿಮರ್ಶೆಮಾಡಿ, ಕಾಗದ ಬರೆದು ಅನುಮೋದನೆಗಾಗಿ ಶ್ರೀಮಾತೆಯವರ ಹತ್ತಿರ ಕಳುಹಿಸಿಕೊಟ್ಟರು. ಪತ್ರವನ್ನು ಓದಿಸಿದ ನಂತರ ಶ್ರೀಮಾತೆಯವರು ಹೇಳಿದರು, 'ರಾಖಾಲನು ಸರಿಯಾಗಿಯೇ ಬರೆದಿದ್ದಾನೆ. ನನ್ನ ಮನಸ್ಸಿನಲ್ಲಿದ್ದ ಒಕ್ಕಣೆಯನ್ನೇ ಬರೆದಿದ್ದಾನೆ' ಎಂದರು. ಅನಂತರ ಆ ಪತ್ರವನ್ನು ಬ್ರಹ್ಮಾನಂದರು, ಆ ಗುರುಭಾಯಿಯ ಹೆಸರಿನಲ್ಲಿ ಅಂಚೆಗೆ ಹಾಕಿದರು.

ಶ್ರೀಮಾತೆಯವರು ಬ್ರಹ್ಮಾನಂದರ ಆರಾಧ್ಯದೇವತೆಯೂ ಆಶ್ರಯದಾತೆಯೂ ಆಗಿದ್ದರು. ಕ್ರಿ.ಶ. ೧೯೨೦ರಲ್ಲಿ ಸ್ವಾಮಿ ಬ್ರಹ್ಮಾನಂದರು ಭುವನೇಶ್ವರದಲ್ಲಿದ್ದರು. ಜುಲಾಯಿ ೨೧ರಂದು, ಮಂಗಳವಾರ ರಾತ್ರಿ ಒಂದೂವರೆ ಘಂಟೆಗೆ ಶ್ರೀಮಾತೆಯವರು ತಮ್ಮ ಭೌತಿಕ ಜೀವನದ ಲೀಲೆಯನ್ನು ಸಮಾಪ್ತಿ ಮಾಡಿದರು. ಆ ದಿನ ರಾತ್ರಿ ಒಂದು ಘಂಟೆಗೆ ಸೇವಕ ನೋಡುವಾಗ ಸ್ವಾಮಿ ಬ್ರಹ್ಮಾನಂದರು ಒಂದು ಶಾಲನ್ನು ಹೊದ್ದುಕೊಂಡು, ಆರಾಮಕುರ್ಚಿಯ ಮೇಲೆ ಕುಳಿತುಕೊಂಡಿದ್ದರು. ಸೇವಕ, 'ಹುಕ್ಕಾ ತಯಾರಿಸಿಕೊಡಲೆ?' ಎಂದು ಕೇಳಿದ. ಮಹಾರಾಜರು ಏನನ್ನೂ ಹೇಳದೆ ಗಂಭೀರವಾಗಿ ಕುಳಿತಿದ್ದರು. ಸೇವಕನಿಗೆ ಮಾತಾಡಲು ಧೈರ್ಯ ಸಾಲದೆ, ಕೋಣೆಯಿಂದ ಹೊರಗೆ ಬಂದ. ಮರುದಿನ ಬೆಳಿಗ್ಗೆ ಮಹಾರಾಜರು ಬೇರೆಲ್ಲಿಯೂ ವಾಯುಸಂಚಾರಕ್ಕೆ ಹೋಗದೆ, ವರಾಂಡದಲ್ಲಿಯೇ ಶತಪಥ ತಿರುಗುತ್ತಿದ್ದರು. ಅಷ್ಟರಲ್ಲಿ ಸ್ವಾಮಿ ಶಾರದಾನಂದರು ಕಳುಹಿಸಿದ ಟೆಲಿಗ್ರಾಮ್ ಬಂತು; ಹಿಂದಿನ ದಿನ ರಾತ್ರಿ ೧.೩೦ಕ್ಕೆ ಶ್ರೀಮಾತೆಯವರು ದೇಹತ್ಯಾಗ ಮಾಡಿದ್ದಾರೆ ಎಂಬ ಒಕ್ಕಣೆ ಅದರಲ್ಲಿತ್ತು. ಈ ಮಾತನ್ನು ಕೇಳಿ ಮಹಾರಾಜರಿಗೆ ಅತ್ಯಂತ ಆಘಾತವಾಯಿತು. ಅವರ ಮುಖದಲ್ಲಿ ಅವ್ಯಕ್ತವಾದ ದುಃಖ ಪ್ರಕಟವಾಯಿತು. ನೇರ ಹೋಗಿ ಸ್ವಲ್ಪ ಹೊತ್ತು ಮಲಗಿಕೊಂಡರು. ಅನಂತರ ಎದ್ದು, 'ನಾನು ಹವಿಷ್ಯಾನ್ನ ಊಟ ಮಾಡುತ್ತೇನೆ' ಎಂದರು. ಮೂರು ದಿನ ಅವರು ಮೌನವಾಗಿದ್ದರು. ಹನ್ನೆರಡು ದಿನ ಚಪ್ಪಲಿ ಧರಿಸಲಿಲ್ಲ. ಅತ್ಯಂತ ದುಃಖದಿಂದ, 'ಇಷ್ಟು ದಿನ ನಾನು ಪರ್ವತದ ನೆರಳಿನಲ್ಲಿದ್ದೆ' ಎಂದರು.

ಮಹಾರಾಜರು ಹೇಳುತ್ತಿದ್ದರು: ''ತಾಯಿಯನ್ನು ಅರಿತುಕೊಳ್ಳುವುದು ಬಹಳ ಕಷ್ಟದ ಕೆಲಸ. ಅವರು ಮುಸುಕು ಹಾಕಿಕೊಂಡು ಸಾಮಾನ್ಯ ಸ್ತ್ರೀಯಂತೆ ಇರುತ್ತಿದ್ದರು. ಅವರು ಸಾಕ್ಷಾತ್ ಜಗದಂಬೆ. ಅವರು ಯಾರೆಂದು, ಪರಮಹಂಸರು ಸ್ವತಃ ಅರಿವು ಮಾಡಿಕೊಟ್ಟಿದ್ದರಿಂದ ನಾವು ಅರಿತುಕೊಂಡಿದ್ದೆವು. ಇಲ್ಲದಿದ್ದರೆ ನಮ್ಮಿಂದಲೇ ನಾವು ಅರಿತುಕೊಳ್ಳಲು ಸಾಧ್ಯವೆ?''

ಶ್ರೀಮಾತೆ ಯಾವಾಗಲೂ ಅವಗುಂಠನವನ್ನು ಧರಿಸುತ್ತಿದ್ದರು. ಶ್ರೀರಾಮಕೃಷ್ಣರು ಮತ್ತು ಒಂದೆರಡು ವಯೋವೃದ್ಧ ಭಕ್ತರು ಬಿಟ್ಟರೆ ಅವರ ಮುಖವನ್ನು ಯಾರೂ ನೋಡಿರಲಿಲ್ಲ; ವಿವೇಕಾನಂದರು, ಬ್ರಹ್ಮಾನಂದರು ಕೂಡ ಇದಕ್ಕೆ ಹೊರತಾಗಿರಲಿಲ್ಲ. ದಕ್ಷಿಣೇಶ್ವರದ ಕೋಶಾಧಿಕಾರಿಯನ್ನೊಮ್ಮೆ ಒಬ್ಬರು, 'ಶ್ರೀಮಾತೆ ಎಲ್ಲಿರುತ್ತಾರೆ?' ಎಂದು ಕೇಳಿದರು. ಆತ ಹೇಳಿದ, 'ಅವರು ಇಲ್ಲಿದ್ದಾರಂತೆ, ಆದರೆ ನಾನು ಅವರನ್ನು ಈ ತನಕ ನೋಡಿಲ್ಲ.' ಶ್ರೀಮಾತೆ ತಮ್ಮ ಬಾಹ್ಯ ದೇಹವನ್ನು ಮುಚ್ಚಿ ಕೊಂಡಹಾಗೆ, ಅವರ ದೈವೀಶಕ್ತಿಯನ್ನೂ ಅವ್ಯಕ್ತವಾಗಿಟ್ಟುಕೊಂಡಿದ್ದರು. ಅವರ ದೈವೀಶಕ್ತಿಯನ್ನು ನಾವು ದಿನ ನಿತ್ಯ ಎಷ್ಟು ಸ್ಮರಣ, ಮನನ ಮತ್ತು ನಿಧಿಧ್ಯಾಸನ ಮಾಡಬಹುದೆಂದು ಹೇಳುವುದೂ ಕೂಡ ನಮ್ಮ ಶಕ್ತಿಗೆ ಮೀರಿದ್ದು. ಕ್ಷಣಕಾಲವಾದರೂ, ಈ ಅನಂತ ಶಕ್ತಿಯ ಸಾನ್ನಿಧ್ಯವನ್ನು ಸ್ಪರ್ಶಮಾಡಿ ಆನಂದವನ್ನು ಪಡೆಯಬಹುದು. ಒಂದು ಮುಹೂರ್ತವಾದರೂ ಸರಿ, ಈ ಐಶ್ವರ್ಯ ಶಕ್ತಿಯನ್ನು ಸ್ಪರ್ಶಮಾಡಿದರೆ, ಅದೇ ಪರಮಪ್ರಾಪ್ತಿ. ❁

# ಅಮ್ಮನಿಗೊಂದು ಪತ್ರ

– ಸದಾಶಿವ ಹಿರೇಮಠ

ಆತ್ಮೀಯರಿಗೆ ಪತ್ರ ಬರೆಯುವ ಮೂಲಕ ನಮ್ಮ ಅಂತರಂಗವನ್ನು ತೋಡಿಕೊಳ್ಳುವ ಪರಿಪಾಠ ಇತ್ತೀಚೆಗೆ ಕಡಿಮೆಯಾಗುತ್ತಿದೆ. ಕಾಲ್ಪನಿಕವಾಗಿಯಾದರೂ, ಪತ್ರಮುಖೇನ ತಮ್ಮ ಅಂತರಂಗವನ್ನು ಶ್ರೀಮಾತೆಯೆದುರು ನಿವೇದಿಸಿಕೊಂಡಿರುವ ಲೇಖಕರು ಧಾರವಾಡದ ನಿವಾಸಿಗಳು.

ಅಮ್ಮಾ,

ನಾನಿಂದು ಈ ಪತ್ರ ಬರೆಯುತ್ತಿರುವೆ. ನಿಜ, ನೀನಿಲ್ಲ ಇಂದು. ಆದರೆ ನೀನು ಸರ್ವವ್ಯಾಪಿ, ಭಾವಗ್ರಾಹಿ. ನನ್ನೀ ಭಾವನೆಗಳನ್ನು ನಿನ್ನೊಡನೆ ಹಂಚಿಕೊಳ್ಳಲು ಬಯಸುತ್ತಿರುವೆ. ಹೃದಯವಾಸಿ, ಅಂತರ್ಯಾಮಿ ನಿನ್ನಿಂದ ನಾವೇನನ್ನು ಮುಚ್ಚಿಡಲು ಸಾಧ್ಯ? ಅದಕ್ಕಾಗಿ ನಿನ್ನೊಡನೆ ಈ ಪತ್ರದಿಂದ ನಾನಿವನ್ನು ತೆರೆದಿಡುತ್ತಿರುವೆ.

ಈ ಮನಸ್ಸು ಅತಿ ಚಂಚಲ, ಪ್ರಚಂಡ. ಅದನ್ನು ಕಟ್ಟುವುದೆಂದರೆ, ಗಾಳಿಯನ್ನು ಕಟ್ಟಿದಷ್ಟೇ ಕಷ್ಟ. ಆದರೆ ನಿನ್ನ ನಾಮ ಜಪ, ನಿನ್ನ ಕೃಪೆ ಅದನ್ನು ಒಂದಿಷ್ಟು ಹತೋಟಿಗೆ ತಂದಿದೆ. ಆದರೆ ನಡೆವ ದಾರಿ ಇನ್ನೂ ದೂರ. ಒಳಗೆ ಅಡಗಿ ಕುಳಿತಿರುವ ವಾಸನೆಗಳ ಕಾಟ ಬೇರೆ. ಮನಸ್ಸು ಅವುಗಳ ಬಂಧು. ನಾನೆಂಬುದನ್ನು ಅಡಗಿಸಿಬಿಟ್ಟಿವೆ. ನಾನು ದೇಹವಲ್ಲ ಆತ್ಮ ಎಂಬುದನ್ನೇ ಮರೆಸಿಬಿಟ್ಟಿವೆ. ಆದರೆ ನಿನ್ನ ನಾಮವೆಂಬ ಬೇಲಿಯನ್ನು ಕಟ್ಟಲೆಳಸುತ್ತಿರುವೆ, ಅವು ಒಳನುಸುಳದಂತೆ. ಅಮ್ಮ ನಿನ್ನ ನಾಮವೊಂದೆ ಆಧಾರ, ಶರಣು. ಅಮ್ಮ, ನಿನಗೆ ಶರಣಾಗಬೇಕು ಅಂದರೆ ಎಷ್ಟೊಂದು ಶುಚಿ ನಾನಾಗಬೇಕು. ನನ್ನಿಂದಾಗಿ ನಿನ್ನತ್ತ ಯಾರೂ ಬೊಟ್ಟು ಮಾಡಿ ತೋರಿಸಬಾರದಲ್ಲವೆ?

ಆಯುಸ್ಸು, ದಿನಗಳು ಕಳೆದು ಹೋಗುತ್ತಿವೆ. ಜೀರ್ಣ ಶೀರ್ಣ ಶರೀರ ಒಂದು ದಿನ ಬಿದ್ದು ಹೋಗುವುದು. ಶಕ್ತಿಗುಂದುವುದು. ಹಾಗಾಗುವ ಮೊದಲು ನಾನು ನಿನ್ನ ಕೃಪೆ ಪಡೆಯಬೇಕು. ನಾನು ಮಾಡುತ್ತಿರುವ ಸಾಧನೆ ಎಷ್ಟೂ ಸಾಲದು. ಅದು ನಿನಗೂ ಗೊತ್ತು. ಅಣ್ಣನವರ ವಚನ ಎಷ್ಟು ಮಾರ್ಮಿಕ:

ನರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ,
ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ,
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ
ಮುನ್ನ ಪೂಜಿಸು ಕೂಡಲಸಂಗಮದೇವನ.

ಎಂಥ ಅದ್ಭುತ ಚಿತ್ರಣ ಇದು. ಸಾವಿಗೂ ಮುನ್ನ ನಾವು ದೇವರವರಾಗಬೇಕು. ಆದರೆ ಅದು ಎಷ್ಟು ಕಷ್ಟ, ಇಂದಿನ ವಿಕೃತ ಪ್ರಪಂಚದಲ್ಲಿ.

ಅಮ್ಮ! ಎಲ್ಲೆಲ್ಲೂ ನಿನ್ನನ್ನೇ ಕಾಣಬೇಕು. ನಿನ್ನ ಮಡಿಲೊಳೊರಗಿ ನಲ್ಜೋಗುಳವ ಕೇಳಲೆಂಬಾಸೆ. ನಿನ್ನ ಮಮತೆಯ ಸ್ಪರ್ಶ ಅನುಭವಿಸಬೇಕು. ಎಂಥ ಕನಸು ನನ್ನದು! ಸಿಗುದುದಕ್ಕೆ ಕೈಯ



ಚಾಚುವ ಹೆಬ್ಬಯಕೆ. ಆದರೆ ಕವಿವಾಣಿಯೊಂದು ನನ್ನ ಹೃದಯದಲ್ಲಿ ನಿರತ ಮಿಡಿಯುತ್ತಿದೆ:

ಕರುಣಾಳು ಬಾ ಬೆಳಕೆ ಮುಸುಕಿದೀ ಮಬ್ಬಿನಲಿ
ಕೈಹಿಡಿದು ನಡೆಸೆನ್ನನು.
ಇರುಳು ಕತ್ತಲೆಯ ಗವಿ; ಮನೆ ದೂರ, ಕನಿಕರಿಸಿ
ಕೈಹಿಡಿದು ನಡೆಸೆನ್ನನು.
ಹೇಳಿ ನನ್ನಡಿಯಿಡಿಸು, ಬಲು ದೂರ ನೋಟವನು
ಕೇಳೆನೊಡನೆಯೆ ಸಾಕು, ನನಗೊಂದು ಹೆಜ್ಜೆ.

ಅಮ್ಮ, ನೀನು ಕೈಹಿಡಿದು ನಡೆಸುವ ಒಂದು ಹೆಜ್ಜೆ ಎಷ್ಟು ಅಮೂಲ್ಯ! ಅದು ಮುನ್ನಡೆಸುವ ದಾರಿದೀಪ. ಈ ತೀರದಿಂದ ಆ ಲೋಕಕ್ಕೆ ಕರೆದೊಯ್ಯುವ ದೋಣಿ. ಆದರೆ ಆ ಒಂದು ಹೆಜ್ಜೆಗಾಗಿ ಪರಿತಪಿಸುತ್ತಿರುವೆ.

ಎಂತೆಂಥ ಕಷ್ಟ ಸಂಕೋಲೆಗಳಿಂದ, ಪಾಪಗಳಿಂದ ರಕ್ಷಿಸಿರುವೆ, ನಮಗರಿವಾಗದಂತೆ. ಸದಾ ನಮ್ಮಿಂದ ತಪ್ಪುಗಳು ಘಟಿಸುತ್ತಲೇ ಇರುತ್ತವೆ; ನೀನು ರಕ್ಷಿಸುತ್ತಲೇ ಇರುವೆ.

'ನೂರುಸಲ ನೀನೆತ್ತಿ ನಿಲ್ಲಿಸಿದರೂ ಕೂಡ
ನೂರು ಸಲ ಬೀಳುವುದು ನಮ್ಮ ಪಾಡು.

ಇಂಥ ದುರ್ಬಲ ಮತಿಯ ಕರುಣದಿಂದಲಿ ನೋಡು
ಮೃದುನುಡಿಯೊಳೆಮ್ಮೊಡನೆ ಮಾತನಾಡು.'

– ಇದು 'ವಚನವೇದ' ದಲ್ಲಿನ ಭಜನೆಯ ಒಂದು ನುಡಿ. ಎಷ್ಟೊಂದು ಆರ್ತಭಾವ ಇಲ್ಲಿದೆ! ನೀನು ವಾತ್ಸಲ್ಯಮಯಿ, ನಿನ್ನ ಕರುಣೆ ಅಪಾರ. ಅದಕ್ಕಾಗಿ ನಿನ್ನಲ್ಲಿ ನಮ್ಮ ಮೊರೆ. 'ಅಮ್ಮ' ಎಂಬ ನುಡಿಗೆ ಮನಸೋತವಳು ನೀನು. ನನ್ನೀ ಜೀವನದ ಪಯಣದಲ್ಲಿ ನೀನಿತ್ತ ರಕ್ಷೆ ಅಪಾರ. ನಮಗರಿವಿಲ್ಲದೆ ನಮ್ಮನ್ನು ಎಂತೋ ರಕ್ಷಿಸುತ್ತಿರುವೆ.

ಅಮ್ಮ, ನೀನು–ಶ್ರೀರಾಮಕೃಷ್ಣರು ಅಭಿನ್ನರು ಎಂದು ನೀನೇ ನುಡಿದ ನುಡಿ. ಇದನ್ನು ಅರಗಿಸುವುದು ಎಷ್ಟು ಕಷ್ಟ ಎಂಬುದು ಮಾನವಮಾತ್ರರಾದ ನಮಗೆ ಗೊತ್ತು. ನೀವಿಬ್ಬರೂ ಒಂದು. ಆದರೆ ಅಮ್ಮ, ನಿಮ್ಮನ್ನು ಮನಸ್ಸಿನಲ್ಲಿ ಭಾವಿಸಿದಾಗ ಶ್ರೀರಾಮಕೃಷ್ಣರು ಮರೆಯಾಗುತ್ತಾರೆ. ಅವರನ್ನು ಭಾವಿಸಿದರೆ ನೀನಿಲ್ಲ. ಅಭೇದಾನಂದರ ಸ್ತೋತ್ರ ನಮಗಾಶ್ವಾಸನೆ:

ಜನನೀಂ ಶಾರದಾಂ ದೇವೀಂ ರಾಮಕೃಷ್ಣಂ ಜಗದ್ಗುರುಂ ।
ಪಾದಪದ್ಮೇ ತಯೋಃ ಶ್ರಿತ್ವಾ ಪ್ರಣಮಾಮಿ ಮುಹುರ್ಮುಹುಃ ॥

ಶ್ರೀರಾಮಕೃಷ್ಣಗತಪ್ರಾಣಳು ನೀನು. ನಿನ್ನನ್ನು ಆರಾಧಿಸಿದಾಗ ಸ್ವಾಭಾವಿಕವಾಗಿ ಅಲ್ಲಿ ಶ್ರೀರಾಮಕೃಷ್ಣರ ಆರಾಧನೆ ನಡೆದು ಹೋಗುತ್ತದೆ, ಎನ್ನುತ್ತದೆ ಮನಸ್ಸು. ಇದು ಸರಿ ಎಂಬುದು ನನ್ನ ನಂಬುಗೆ.

ಅಮ್ಮ, ಈ ಪತ್ರ ಬರೆಯುತ್ತಿರುವುದು ನಿನಗೆ. ಆದರೆ ನೀನು ಶ್ರೀರಾಮಕೃಷ್ಣಗತಳು. ಅವರಿಲ್ಲದೆ ನೀನಿಲ್ಲ. ಮಕ್ಕಳಿಗೆ ಅಮ್ಮನಲ್ಲಿ ಏನೋ ಸಲುಗೆ, ಪ್ರೀತಿ. ಈ ಕಾರಣ ಎಲ್ಲ ನಿನ್ನಲ್ಲಿ ಹೇಳಿಕೊಳ್ಳುವುದು. ಹಾಗೆಂದು ಶ್ರೀರಾಮಕೃಷ್ಣರನ್ನು ದೂರ ಸರಿಸುತ್ತಿಲ್ಲ. ನಿನ್ನನ್ನೇ ಆವರಿಸಿರುವ ಅವರನ್ನು ದೂರೀಕರಿಸುವುದು ಸಾಧ್ಯವೆ, ಸಾಧುವೆ? ಅವರು ನಮ್ಮ ತಿಳಿವಿಗೆ ಸಿಲುಕದವರು. ಅವರನ್ನು ಹಿಡಿಯುತ್ತಿರುವುದು ನಿನ್ನ ಮೂಲಕ. ನಿನ್ನ ಕೃಪೆ ದೊರೆತರೆ ಅವರ ಕೃಪೆಯೂ ನಮ್ಮದಾಗಲಿದೆ. ಅವರೇ ಹೇಳಿಲ್ಲವೆ, ನಿನ್ನೆಡೆಗೆ ಬಂದವರಿಗೆಲ್ಲ ಕೊನೆಗೆ ಮುಕ್ತಿ ನೀಡುವುದಾಗಿ. ನಿನ್ನ ಕೃಪೆ ಪ್ರೀತಿ ನಮ್ಮತ್ತ ಹರಿದು ಬಂದಾಗ ಅವರದೂ ಅದರಲ್ಲಿ ಮಿಳಿತವಾಗಿದೆಯೆಂದುಕೊಳ್ಳುವೆ.

ಪೃಥಿವ್ಯಾಂ ಪುತ್ರಾಸ್ತೇ ಜನನಿ ಬಹವಃ ಸಂತಿ ಸರಲಾಃ
ಪರಂ ತೇಷಾಂ ಮಧ್ಯೇ ವಿರಲತರಲೋಽಹಂ ತವ ಸುತಃ ।
ಮದೀಯೋಽಯಂ ತ್ಯಾಗಃ ಸಮುಚಿತಮಿದಂ ನೋ ತವ ಶಿವೇ
ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ॥

ಶಂಕರಾಚಾರ್ಯರ ಈ ಹೃದಯತುಂಬಿ ಹಾಡಿದ ನುಡಿ ನನಗೂ ಅನ್ವಯಿಸುತ್ತದೆ. ನಾನೂ ಕೂಡ ವಿರಲತರಲ ಮಗ, ಪರಿತ್ಯಕ್ತ, ನಿನ್ನ ಮಡಿಲಿಗಾಗಿ ಹಾತೊರೆದಿರುವೆ. ಮಕ್ಕಳಲ್ಲಿ ಭೇದ ವೆಣಿಸದ ಅನುಪಮ ತಾಯಿ ನೀನು. ನಮ್ಮಂಥ ದುರ್ಬಲ ಮಕ್ಕಳಿಗೆ, ಅಂದು ಆಸರೆಯಾಗಿದ್ದಂತೆ ಈಗಲೂ ಆಗುವೆಯೆಂದುಕೊಳ್ಳುವೆ. ನಿನ್ನನ್ನು ನಂಬಿ, ನಿನ್ನಲ್ಲೇ ಶರಣು ಹೋಗಿ, ನೀನೇ ಎಲ್ಲ ಎಂದುಕೊಂಡ ನನಗೆ ನಿನ್ನ ಕೃಪೆ ಹರಿಯದಿದ್ದರೆ, ಅದು ನಿನಗೇ ಕುಂದು. ಅದಕಿಂದು ನಿನ್ನಲ್ಲಿ ಮೊರೆ. ಕ್ಷಣಕ್ಷಣವೂ ಭವದೀ ಕೊಚ್ಚೆಯಲ್ಲಿ ಮುಳುಗುತ್ತಿರುವ ನಮ್ಮನ್ನು ದಡ ಸೇರಿಸುವ ದೋಣಿ ನೀನು.

ಈ ನನ್ನ ನುಡಿಗಳನ್ನು ನೀನು ಗಮನಿಸಿರುವೆ – ಎಂದುಕೊಳ್ಳುತ್ತಿರುವೆ. ಹಾಗೆಂದುಕೊಂಡೇ ಈ ಪತ್ರಕ್ಕೆ ವಿರಾಮ ಸಲ್ಲಿಸುತ್ತಿರುವೆ. ನಿಮ್ಮ ಅಡಿದಾವರೆಗಳಲ್ಲಿ ಅನಂತ ಅನಂತ ಶಿರಸಾಷ್ಟಾಂಗ ನಮಸ್ಕಾರಗಳು.

ನಿಮ್ಮ ಪ್ರೀತಿಗೆ ಹಾತೊರೆಯುತ್ತಿರುವ
ನಿಮ್ಮ ಮಗ,
ಸದಾಶಿವ

# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

ಭಾಗ ೧೪

**೩ ಜನವರಿ, ೧೯೩೭:** ಸಂಜೆ ಬಹರಾಂಪುರ ಕಾಲೇಜಿನ ಪ್ರಿನ್ಸಿಪಾಲರು ಬಂದಿದ್ದರು. ಬಾಬಾ ಅವರೊಡನೆ ಶಿಕ್ಷಣಕ್ಕೆ ಸಂಬಂಧಿಸಿದಂತೆ ನಾನಾ ವಿಚಾರಗಳನ್ನು ಚರ್ಚಿಸಿದರು. ನಡುವೆ botany (ಸಸ್ಯಶಾಸ್ತ್ರ) ಹಾಗೂ co-education (ಸಹ-ಶಿಕ್ಷಣ) ಕುರಿತಂತೆ ಕೂಡ ಆಲೋಚನೆ ಮಾಡಿದರು. ಕೊನೆಗೆ ಬಾಬಾ, ''ಹುಡುಗ-ಹುಡುಗಿಯರಿಗೆ ಉತ್ತಮ ನಡುವಳಿಕೆಯನ್ನು ಕಲಿಸುವುದೇ ಶಿಕ್ಷಣ ಅತ್ಯುತ್ತಮ ಅಂಶ'' ಎಂದರು.

''ಪಶ್ಚಿಮ ಭಾರತದಲ್ಲಿ ಸಾಧುಗಳ ಹೆಸರಿಗೆ 'ಮಹಾರಾಜ್' ಎಂಬ ಪದವನ್ನು ಸೇರಿಸುತ್ತಾರೆ – ಗೌರವ ಸೂಚಿಸಲು 'ಮಹಾರಾಜ್' ಎನ್ನುತ್ತಾರೆ. ಆದ್ದರಿಂದಲೇ ನಾವೂ ಬಳಸುತ್ತೇವೆ. ಅಶೋಕ, ಅಕ್ಬರ ಮುಂತಾದವರ ಹೆಸರಿನ ಮುಂದೆ 'ಸಾಮ್ರಾಟ್' ಎಂಬ ಶಬ್ದ ಉಪಯೋಗಿಸಬೇಕು. 'ಸಾಮ್ರಾಟ್ ಐದನೇ ಜಾರ್ಜ್' ಎನ್ನಬೇಕು. 'ಅಮಾನಿನಾ ಮಾನದೇನ' –'ಮಾನಹೀನನನ್ನೂ ಗೌರವಿಸಬೇಕು.' ('ಮಾನದೇನ' ಎಂಬ ಶಬ್ದವನ್ನು ಒತ್ತಿಹೇಳಿ ದರು.) ಯಾರಿಗೆ ಎಷ್ಟು ಸನ್ಮಾನ ಸಲ್ಲಬೇಕೋ, ಅದನ್ನು ಅವರಿಗೆ ಸಲ್ಲಿಸಬೇಕು. ಒಬ್ಬ ಮುಸಲ್ಮಾನ ಫಕೀರನಿಂದ ತಿಳಿದಿದ್ದೆ – 'ಮಹಮ್ಮದನ ಹೆಸರನ್ನು ಹೇಳುವಾಗಲೆಲ್ಲ 'ಹಜರತ್' ಎನ್ನಬೇಕು.' ನೀನು ಇತರರನ್ನು ಗೌರವಿಸಿದರೆ, ಅವರೂ ನಿನ್ನನ್ನು ಗೌರವಿಸುತ್ತಾರೆ. ಆದ್ದರಿಂದ 'ಮಣಿ'ಯನ್ನು 'ಮಣಿ ಮಹಾರಾಜ್' ಎಂದು ಕರೆಯದಿದ್ದರೆ ನಡೆಯದು.''

ನಾಳೆ ಶ್ರೀಮಾತೆಯವರ ಜನ್ಮದಿನ. ಸಂಧ್ಯಾರತಿಯ ನಂತರ ರಾತ್ರಿಯ ಒಂದು ಪ್ರಹರ ಕಳೆದಿದೆ. ಪೂಜಾರಿ ಶ್ರೀರಾಮಕೃಷ್ಣರನ್ನು (ಭಾವಚಿತ್ರವನ್ನು) ಮಲಗಿಸಿದ ಬಳಿಕ ಬಾಬಾ ಬಳಿಗೆ ಬಂದು, ಮರುದಿನ ಯಾವ ರೀತಿ ಪೂಜೆ ಮಾಡಬೇಕೆಂದು ಅವರನ್ನು ಕೇಳಿದ. ಬಾಬಾ ಹೇಳಿದರು:

'' 'ತಾಯಿ ಸ್ವೀಕರಿಸು; ತಾಯಿ, ಊಟ ಮಾಡು; ತಾಯಿ, ತೊಟ್ಟುಕೊ' ಎಂದು ಹೇಳಬೇಕು. ಪೂಜೆ ಎಂದರೆ ಇದೇ ಅಲ್ಲವೆ? ಮಂತ್ರ – ಇತ್ಯಾದಿಗಳೆಲ್ಲ ಏನು? ಠಾಕೂರರು ಅಷ್ಟಾಗಿ ಸಂಸ್ಕೃತ ಮಂತ್ರಗಳನ್ನು ಹೇಳುತ್ತಿರಲಿಲ್ಲ. ಅಂತರಾಳದಿಂದ ಹೇಳಬೇಕು, 'ಅಮ್ಮಾ, ಇದನ್ನು ತೆಗೆದುಕೊ. ನಿನ್ನದೇ ಆಗಿರುವ ವಸ್ತುಗಳನ್ನು ನಿನಗೇ ಕೊಡುತ್ತಿದ್ದೇನೆ. ಎಷ್ಟೊಂದು ಮಂದಿ ಭಕ್ತರು ಇಂದು ನಿನಗೆ ಒಳ್ಳೊಳ್ಳೆಯ ವಸ್ತುಗಳನ್ನು ಕೊಡುತ್ತಿದ್ದಾರೆ! ನನಗೇನು ಲಭಿಸಿದೆಯೋ, ಅದನ್ನು ತಂದಿದ್ದೇನೆ. ನನಗೆ ಇನ್ನೇನೂ ಲಭಿಸಿಲ್ಲ.



ನೀನು ಇದನ್ನು ಪ್ರೀತಿಯಿಂದ ತೆಗೆದುಕೋ, ತಾಯಿ' ಎಂದು ಕಂಬನಿಗರೆಯುತ್ತ ಹೇಳಬೇಕು. ಆಕೆ ಪ್ರಸನ್ನಳಾಗಿ ಅವನ್ನು ಸ್ವೀಕರಿಸುತ್ತಿದ್ದಾಳೆ ಎಂದು ನೀನು ಭಾವಿಸಬೇಕು.

''ಹೋಮವನ್ನು ಮಾಡಬೇಕು. ನಿನ್ನ ಸರ್ವಸ್ವವನ್ನೂ ಆಹುತಿ ನೀಡುತ್ತಿರುವೆ ಎಂದು ತಿಳಿ. ೨೮ ಬಿಲ್ವಪತ್ರೆಗಳನ್ನು ತಾಯಿಯ ಹೆಸರಿನಲ್ಲಿ ಆಹುತಿ ನೀಡಬೇಕು. ಇಲ್ಲದಿದ್ದರೆ, ದಿನವಿಡೀ ತಾಯಿಯ ಪೂಜೆ ನಡೆಯುತ್ತಿದ್ದರೂ, ಇತ್ತ ತಾಯಿಯ ಮಕ್ಕಳೆಲ್ಲ ಉಪವಾಸದಿಂದ ಸೊರಗುತ್ತಾರೆ. ಅತ್ತ ತಾಯಿಯ ನೈವೇದ್ಯ ಮುಗಿಯುವುದೇ ಇಲ್ಲ. ನಮ್ಮ ತಾಯಿ ಈ ರೀತಿಯ ಪೂಜೆಯನ್ನು ಇಷ್ಟಪಡುತ್ತಿರಲಿಲ್ಲ. ಪೂಜೆ ಭಾವಪೂರ್ಣವಾಗಿರಬೇಕು, ತಿಳಿಯಿತೆ?''

* * *

**೪, ಜನವರಿ, ೧೯೩೭:** ಇಂದು ಶ್ರೀಮಾತೆಯವರ ಜಯಂತಿ ದಿನದ ಪೂಜೆ. ಬೆಳಕು ಹರಿಯುವ ಮೊದಲೇ ಮಂದಿರದಲ್ಲಿ ಮಂಗಳಾರತಿ ನಡೆಯಿತು. ಬಳಿಕ ಎಲ್ಲರೂ ಬಂದು ವಿನೋದ ಕುಟೀರದಲ್ಲಿ ಬಾಬಾ ಬಳಿ ಕುಳಿತರು. ಒಬ್ಬ ಶಿವನನ್ನು ಕುರಿತ ಹಾಡನ್ನು ಹಾಡಿದ: 'ಶಿವ ಶಿವ ಶಂಕರ ಭೋಲಾ ಮಹೇಶ್ವರ..' ಅದರ ನಂತರ ಬಾಬಾ ಕೈಜೋಡಿಸಿ ಗದ್ಗದ ಕಂಠದಿಂದ, 'ನಾಗೇಂದ್ರಹಾರಾಯ ತ್ರಿಲೋಚನಾಯ... (ಶಿವ ಪಂಚಾಕ್ಷರ ಸ್ತೋತ್ರ)' ಹಾಡಿದರು. ಭಕ್ತನೊಬ್ಬನಿಗೆ ಹಾಡಲು ಹೇಳಿದಾಗ ಅವನು ರಾಧೆಯನ್ನು ಕುರಿತ ಹಾಡನ್ನು ಹಾಡಿದ. ಬಾಬಾ ಹೇಳಿ

ದರು: ''ಅದೇಕೆ? ಜಗನ್ಮಾತೆಯ ಹಾಡುಗಳು ಗೊತ್ತಿಲ್ಲವೆ?'' ತಕ್ಷಣವೇ, ''ಇಲ್ಲ, ಇಲ್ಲ ; ನಮ್ಮ ತಾಯಿಯೇ ಎಲ್ಲವೂ ಆಗಿದ್ದಾಳೆ'' ಎಂದರು. ಭಕ್ತ ಜಗನ್ಮಾತೆಯ ಒಂದು ಹಾಡನ್ನು ಹಾಡಿದ.

ಸ್ವಲ್ಪ ಸಮಯ ಕಳೆದು, ಭಕ್ತಿ ಹಾಗು ಅನ್ನಪೂರ್ಣ ಕೊಟ್ಟ perambulator (ಟಯರ್ ಉಳ್ಳ, ಸುಂದರವಾದ ತಳ್ಳುವ ಗಾಡಿ) ನಲ್ಲಿ ಕುಳಿತುಕೊಂಡು ಬಾಬಾ ಠಾಕೂರರ ಮಂದಿರದ ಬಳಿ ಬಂದರು. ಮುಂಭಾಗದ ಜಗಲಿಯಲ್ಲಿ ಗಾಡಿಯನ್ನು ನಿಲ್ಲಿಸಲಾಯಿತು. ಬಾಬಾ ಠಾಕೂರರ ಮಂದಿರದ ಕಡೆ ಕೈಜೋಡಿಸಿ, ಭಕ್ತಿ-ಭಾವಭರಿತವಾಗಿ, ಗದ್ಗದ ಕಂಠದಿಂದ ಕೂಡಿ, ಗಂಭೀರ ಧ್ವನಿಯಲ್ಲಿ ಹಾಡಲಾರಂಭಿಸದರು:

**ಕಸ್ತೂರಿಕಾಚಂದನ ಲೇಪನಾಯೈ**
**ಸ್ಮಶಾನಭಸ್ಮಾಂಗವಿಲೇಪನಾಯ ।**
**ಸತ್ಕುಂಡಲಾಯೈ ಚ ಫಣಿಕುಂಡಲಾಯ**
**ನಮಃ ಶಿವಾಯೈ ಚ ನಮಃ ಶಿವಾಯ ।**

ಈ ಸ್ತೋತ್ರವನ್ನು ಹಾಡಿದ ನಂತರ ಎರಡೂ ಕೈಗಳಿಂದ ತಲೆಯನ್ನು ಸ್ಪರ್ಶಿಸಿ ಪ್ರಣಾಮ ಮಾಡಿದರು. ಬಳಿಕ ಪೂಜೆ ಹಾಗೂ ನೈವೇದ್ಯದ ವ್ಯವಸ್ಥೆಯ ಬಗ್ಗೆ ವಿಚಾರಿಸಿಕೊಂಡು ಬಂದು, ವಿನೋದ ಕುಟೀರಕ್ಕೆ ಹಿಂದಿರುಗಿದರು. ಚಹಾ ಕುಡಿದ ಬಳಿಕ ಕೋಣೆಯಲ್ಲಿ ಅನೇಕರು ಸೇರಿದ್ದುದನ್ನು ಕಂಡು, ''ಇಂದು ಶ್ರೀಮಾತೆಯವರ ಜಯಂತಿಯ ಪೂಜೆಯಾದ್ದರಿಂದ ಕೇವಲ ಅವರ ವಿಷಯವೇ ನೆನಪಿಗೆ ಬರುತ್ತಿದೆ. ಅವರ ಬಗ್ಗೆ ಏನಾದರೂ ಹೇಳೋಣ ಎಂದುಕೊಂಡಿದ್ದೇನೆ'' ಎಂದರು. ಭಕ್ತರ ಕಡೆಗೆ ನೋಡುತ್ತ, ''೧೧ ಗಂಟೆಯ ಹೊತ್ತಿಗೆ ನನಗೆ ನೆನಪಿಸಿ'' ಎಂದರು.

* * *

ಮಧ್ಯಾಹ್ನ ೧೧ ಗಂಟೆಯ ಹೊತ್ತಿಗೆ ಅನೇಕ ಮಂದಿ ಬಾಬಾ ಕೋಣೆಯಲ್ಲಿ ಕಲೆತರು. ಮಲಗಿದ್ದ ಬಾಬಾ, ''ಶರೀರ ಬಹಳ ಕೆಟ್ಟಿದೆ'' ಎಂದರು: ಅವರಿಗೆ ಮುಂದೆ ಏನೂ ಹೇಳಲಾಗಲಿಲ್ಲ. ಸ್ವಲ್ಪ ಹೊತ್ತಿನ ನಂತರ ಎದ್ದು ಕುಳಿತು ಹೇಳಿದರು: ''ಇನ್ನೇನು ಹೇಳಲಿ? ಕಾಶೀಪುರದಲ್ಲಿ ಠಾಕೂರರ ದೇಹ ಇನ್ನೂ ಕೋಣೆಯಲ್ಲಿತ್ತು. ಓ! ಅದೆಂಥ ಕರುಣಾಜನಕ ರೋದನ! ಸಾಮಾನ್ಯವಾಗಿ ಶ್ರೀಮಾತೆಯವರು ಯಾವ ಕೋಣೆಯಲ್ಲಿದ್ದಾರೆಂದು ಯಾರಿಗೂ ತಿಳಿಯುತ್ತಿರಲಿಲ್ಲ. ಶ್ರೀಮಾತೆಯವರು ಒಂದು ನೆಲದ ಮೇಲೆ ಧೊಪ್ಪನೆ ಬಿದ್ದು, 'ಅಮ್ಮಾ, ನೀನೆಲ್ಲಿಗೆ ಹೋದೆ? ನನ್ನನ್ನು ಯಾರಿಗೊಪ್ಪಿಸಿ ಹೋದೆ?' ಎಂದು ಅಳತೊಡಗಿದರು. ಶ್ರೀಮಾತೆ ಠಾಕೂರರನ್ನು ಮಾತೃಭಾವದಿಂದ ನೋಡುತ್ತಿದ್ದರು - ಇದೇ ಇಲ್ಲಿ ಗಮನಿಸಬೇಕಾದ ವಿಷಯ. ಇನ್ನೆಂದಿಗೂ ಶ್ರೀಮಾತೆ ಈ ರೀತಿ ಅಳುವುದು ಕಂಡುಬರಲಿಲ್ಲ. ಅವರು ಈ ರೀತಿ ಭಾವೋದ್ವೇಗಭರಿತರಾದುದನ್ನು ನಾನು ನೋಡಿರುವುದು ಇದೊಂದೇ ಬಾರಿ.

* * *

ಸಂಜೆ ೬.೩೦ ಗಂಟೆ. ಆರತಿಯಾದ ಮೇಲೆ ಒಬ್ಬೊಬ್ಬರಾಗಿ ಎಲ್ಲರೂ ಬಂದು ಬಾಬಾಗೆ ನಮಸ್ಕರಿಸಿ, ಆವರ ಹತ್ತಿರ ಕುಳಿತರು. ಬಾಬಾ ಹಾಲ್‌ನ ಕುರ್ಚಿಯಲ್ಲಿ ಕುಳಿತು ಮಾತುಕತೆಯಾಡುತ್ತಿದ್ದರು. ವಿಜಯಕೃಷ್ಣ ಗೋಸ್ವಾಮಿಯವರ ಅಲೌಕಿಕ ಜೀವನ ಕಥೆ, 'ವೈಕುಂಠ ದರ್ಶನ'ಗಳ ವಿಷಯ ಬಂತು. ನಂತರ ವೃಂದಾವನ ಹಾಗೂ ಜಯಪುರದ ಒಂದೆರಡು ವಿಷಯಗಳಾದ ಮೇಲೆ ಹಿಮಾಲಯದ 'ದಶರಥ ಕೀ ಡಾಂಗಾ'ದಲ್ಲಿ ಬಾಬಾಗೆ ಆದ ದರ್ಶನ ಹಾಗೂ ಅನುಭೂತಿಯ ವಿಚಾರ ಹೇಳಿದರು:

''ಹಿಮಾಲಯದಲ್ಲಿ ಅತ್ಯಂತ ನಿರ್ಜನ ಪ್ರದೇಶವದು. ಅಲ್ಲಿ ನೀರು ಸಿಕ್ಕಿತು, ಕೆಳಗೆಯೇ ಝುರಿ ಹರಿಯುತ್ತಿತ್ತು. ಬಹಳ ಎತ್ತರವಾದ ಜಾಗದಲ್ಲಿ ಚಿಕ್ಕ ಒಂದು ತಂಗುದಾಣ. ತುಂಬಾ ಕೆಳಗಿನಿಂದ ನೀರನ್ನು ಮೇಲಕ್ಕೆ ತರಬೇಕು. ಅದಲ್ಲದೆ, ಕ್ರೂರ ಪ್ರಾಣಿಗಳ ಭಯವೆಂದು ದನಕಾಯುವ ಹುಡುಗರು ನನ್ನನ್ನು ಅವರ ಹಾಡಿಗೆ ಕರೆದುಕೊಂಡು ಹೋದರು. ಕೋಣೆಯ ಹೊರಗೆ ಸುತ್ತಲೂ ಬೆಂಕಿ ಉರಿಯುತ್ತಿತ್ತು, ನಾನು ರಾತ್ರಿ ಕೋಣೆಯಲ್ಲಿ ಮಲಗಿದೆ. ಕೊನೆಗೆ ಆಲೋಚಿಸಿದೆ, 'ಏನು! ಸಂಶಯವೆ? ಏನಾಗುವುದೆಂದು ನೋಡೋಣ' ಎಂದು ಮತ್ತೆ ಹೊರಗೆ ಬಂದು ಮರದ ಕೆಳಗೆ ಕುಳಿತೆ. ಏನೂ ಆಗಲಿಲ್ಲ. ಅನಂತರ ಅದೇ ಎತ್ತರದ ಸ್ಥಳಕ್ಕೆ ಹೋಗಿ ಧ್ಯಾನಮಗ್ನನಾದೆ. ಹಿಂದಿನಿಂದ ಠಾಕೂರರು ಬಂದು ತೋರಿಸಿಕೊಡುತ್ತಿದ್ದಾರೆ - ಚಿನ್ಮಯವಾದ ಹಿಮಾಲಯ; ಶಿವನ ಮೇಲೆ ನಿಂತ ಕಾಳಿ ನರ್ತಿಸುತ್ತಿದ್ದಾಳೆ. ಠಾಕೂರರು ಹಾಡುತ್ತಿದ್ದಾರೆ:

**ನೇಬೇ ನಾಚ್ ಖ್ಯಾಪಾ ಮಾಗೀ**
**ಬಾಜ್‌ಬೆ ಜೇ ಮಹೇಶೇರ್ ಬುಕೆ..**

*(ಧರೆಗಿಳಿದ ಜಗನ್ಮಾತೆ ಉನ್ಮತ್ತಳಾಗಿ ಶಿವನೆದೆಯ ಮೇಲೆ ನರ್ತಿಸುತ್ತಿರುವಳು..)* ''

ಅನಂತರ ಬಾಬಾ ಹೊಸದಾಗಿ ಬಂದ ಭಕ್ತನಿಗೆ ಹಾಡಲು ಹೇಳಿದರು. ಅವನು ಹಾಡಿದ:

**೧. ಜಯ ಯುಗಾವತಾರ..**
**೨.ಅಯುತ ಕಂಠೇ ರಾಮಕೃಷ್ಣ ನಾಮ...**

*(ಅನೇಕ ಜನರಿಂದು ಶ್ರೀರಾಮಕೃಷ್ಣರ ಹೆಸರನ್ನು ಹಾಡುತ್ತಿದ್ದಾರೆ...)*

ಆಗ ಬಾಬಾ, 'ನಿನಗೆ ಜಗನ್ಮಾತೆಯ ಹಾಡು ಗೊತ್ತಿಲ್ಲವೆ?' ಎಂದು ಕೇಳಿದರು. ಭಕ್ತ ಮಾತೆಯ ಹಾಡುಗಳನ್ನು ಹಾಡಿದ:

**ಕಾಲೊ ಮೇಯೇರ್ ಪಾಯೇರ್ ತೊಲಾಯ್**
**ದೇಖೇ ಜಾ ಆಲೋರ್ ನಾಚನ್ ...**

*(ಕಾಳಿಯ ಪಾದದಡಿಯೊಳು ಬೆಳಕಿನ ನರ್ತನವ ನೋಡಿ... )*

**೨. ಆರ್ ಲುಕಾಬಿ ಕೊಥಾಯ್ ಮಾ ಕಾಲಿ..**

*(ಹೇ ಜಗದಂಬೆ ಇನ್ನೆಲ್ಲಿ ಅವಿತುಕೊಳ್ಳುವೆ ನೀ..)*

**೩. ನಿಬಿಡ ಆಂಧಾರೇ ಮಾತೋರ್**
**ಚಮಕೇ ಅರೂಪರಾಶಿ..**

*(ಮಿರುಗುತಿದೆ ನಿನ್ನ ಅಪರೂಪರಾಶಿ, ನಿಬಿಡಾಂಧಕಾರದಲ್ಲಿ..)*

ಇದಾದ ನಂತರ ಬಾಬಾ ತಾವೇ ಹಾಡಲಾರಂಭಿಸಿದರು:

**ಬೋಲ್ ರೇ ತರು ಬೋಲ್ – ಕಾರ್ ಉದ್ದೇಶೇ**
**ದಿನ ರಜನಿ ತಾಕಿಯೆ ಥಾಕೀಶ್ ಊರ್ಧ್ವದೇಶೆ..**

*(ಹಗಲು ರಾತ್ರಿಯೆನ್ನದೆ ಯಾರಿಗಾಗಿ ಮುಗಿಲಿನತ್ತ ನೋಡುತ್ತಿರುವೆ, ಹೇಳು ವೃಕ್ಷವೇ, ನೀನು ಹೇಳು..)*

ಬಾವುಲ್ ರಾಗದಲ್ಲಿ ಹಾಡಲಾರಂಭಿಸಿದರು :

**ಬಾಯಿತೇ ಪಾರ್‌ಲಾಂ ನಾ**
**ಆಮಿ ಆರ್ ಬಾಯಿತೇ ಪಾರೆಲಾಂ ನಾ..**

*(ದೋಣಿಯ ಮುನ್ನಡೆಸಲಾಗದೆನಗೆ...)*

ಹಾಡು ಮುಗಿದ ಮೇಲೆ ಬಾಬಾ ಹೇಳಿದರು: ''ರಾಮಪ್ರಸಾದನ ಹಾಡುಗಳು ಗೊತ್ತಿಲ್ಲವೆ? ಅವನು ಒಂದು ಲಕ್ಷ ದಾಸವಾಳದ ಹೂಗಳಿಂದ ಜಗನ್ಮಾತೆಯನ್ನು ಪೂಜಿಸಿದ್ದ. ಒಂದೊಂದು ಹಾಡಿಗೂ, ಒಂದೊಂದು ದಾಸವಾಳವನ್ನು ಅರ್ಪಿಸಿ ತಾಯಿಯ ಆರಾಧನೆ ಮಾಡುತ್ತಿದ್ದ. ಅಂತೆಯೇ ಒಂದು ಲಕ್ಷ ಹಾಡುಗಳಿಗೆ ಒಂದು ಲಕ್ಷ ದಾಸವಾಳ ಹೂಗಳು. ಇದೇ ಸಾಧನೆ, ಇದೇ ಸಿದ್ಧಿ. ಇವೆಲ್ಲ ಠಾಕೂರರಿಗೆ ಅತ್ಯಂತ ಪ್ರಿಯವಾದ ಹಾಡುಗಳು. ಅವು ಠಾಕೂರರ ಭಾವದಿಂದಲೇ ತುಂಬಿಕೊಂಡಿವೆ. ಇವನ್ನೆಲ್ಲ ಮರೆಯಬಾರದು, ಉಳಿಸಿಕೊಳ್ಳಬೇಕು. ಈ ಎಲ್ಲ ಹಾಡುಗಳನ್ನು ಕಲಿಯಿರಿ, ಕಂಠಪಾಠ ಮಾಡಿಕೊಳ್ಳಿ. ಈಚಿನ ದಿನಗಳಲ್ಲಿ ಹಾಡಲು ಹೇಳಿದರೆ ತಕ್ಷಣ ಪುಸ್ತಕ ಹುಡುಕುತ್ತಾರೆ, ಹಾರ್ಮೋನಿಯಂ ಮೇಲೆ 'ಗೀತಿಗುಚ್ಛ' (ಭಜನೆ, ಹಾಡುಗಳ ಸಂಕಲನ)ವನ್ನು ತೆರೆದಿಟ್ಟುಕೊಂಡು ಹಾಡುವುದು! ನಮ್ಮ ಕಾಲದಲ್ಲಿ ಹೀಗಿರಲಿಲ್ಲ. ಎಲ್ಲವನ್ನೂ ನೆನಪಿನಲ್ಲಿಟ್ಟುಕೊಂಡು ಒಂದೇ ಬಾರಿಗೆ ಹತ್ತು ಹಾಡುಗಳನ್ನು ಹಾಡುತ್ತಿದ್ದರು. ಪುಸ್ತಕವನ್ನು ತೆರೆದಿಟ್ಟುಕೊಂಡು ಹಾಡುವುದನ್ನು ನಾನೆಂದೂ ನೋಡಿಲ್ಲ.''

ಒಬ್ಬ ಬ್ರಹ್ಮಚಾರಿ 'ಹತ್ತು ಗಂಟೆ ಹೊಡೆಯಿತು' ಎಂದ. ಅದರರ್ಥ, ಇನ್ನು ಏಳಬಹುದು ಎಂದು. ಬಾಬಾ ಏರುದನಿಯಲ್ಲಿ, ''ಹತ್ತು ಹೊಡೆದರೇನಾಯಿತಂತೆ? ಭಗವಂತನನ್ನು ಕರೆಯಲು ಇಂಥದೇ ಸಮಯ ಎಂದಿದೆಯೆ? ಗಡಿಯಾರ, ಗಂಟೆ ಬಾರಿಸುವುದರ ಅರ್ಥವೇನು? ಈ ದಿನ ಮತ್ತೆ ಬರುವುದೆ? ಇಂದು ಮಾತೆಯ ದಿವಸ; ವರ್ಷದಲ್ಲಿ ಒಂದೇ ಬಾರಿ ಬರುವುದು'' ಎಂದರು.

''ಭಾಗಲ್ಪುರದಲ್ಲಿ ತಂಬೂರಿ ಸಮೇತವಾಗಿ ಸ್ವಾಮೀಜಿ ಹಾಡುತ್ತಿದ್ದರು. ಸಂಜೆಯಿಂದ ರಾತ್ರಿ ಹನ್ನೆರಡರವರೆಗೂ ಹಾಡು ಮುಂದುವರಿಯಿತು:

**ಏಲೋ ನಾ ಏಲೋ ನಾ ಶ್ಯಾಮ ಕುಂಜ ತೋ ಏಲೋ ನಾ,**
**ರಜನೀ ಪೊಹಾಯೇ ಜಾಯ್ ತಬೂವು ಸೇ ಏಲೋ ನಾ..**

*(ಕೃಷ್ಣ ಬಾರದೆ ಬೃಂದಾವನದ ನಿಕುಂಜ ಕಾನನವು ಶೂನ್ಯವಾಗಿದೆ. ರಾತ್ರಿ ಕಳೆಯಿತಾದರೂ ಕೃಷ್ಣನ ಸುಳಿವಿಲ್ಲ..)*

''ಹಾಡು ಮುಗಿಯುವ ಸೂಚನೆಯೇ ಇದ್ದಂತಿಲ್ಲ. ಎಷ್ಟೋ ಮಂದಿ ದೊಡ್ಡದೊಡ್ಡವರು ಬಂದಿದ್ದಾರೆ, ಯಾರೂ ಏಳುವಂತಿಲ್ಲ. ಇತ್ತ ಊಟ ತಣ್ಣಗಾಗುತ್ತಿತ್ತು. ಕೊನೆಗೆ ಅನೇಕ ಸಲ ಹೇಳಿ ಹಾಡು ನಿಲ್ಲಿಸಬೇಕಾಯಿತು. ಸ್ವಾಮೀಜಿಯವರ ಭಾವನೆ ಅತ್ಯಂತ ಅದ್ಭುತ.

''ಬೇಲೂರು ಮಠದಲ್ಲಿ ಸ್ವಾಮೀಜಿ ಒಂದೊಂದು ದಿನ ಪೂರ್ವಜನ್ಮ, ಜನ್ಮಾಂತರ – ಇವೆಲ್ಲ ಇವೆಯೇ, ಇಲ್ಲವೇ ಎಂದು ತರ್ಕ, ವಾದಗಳನ್ನೇರ್ಪಡಿಸುತ್ತಿದ್ದರು. ಆಗ ಅಲ್ಲಿ ಎರಡು ಪಕ್ಷಗಳಿರುತ್ತಿದ್ದವು. ಸ್ವಾಮೀಜಿ ಮಧ್ಯಸ್ಥಿಕೆ ವಹಿಸಿ, ಒಂದೊಂದು ಸಲ ಒಂದೊಂದು ಪಕ್ಷವನ್ನು ಸೇರುತ್ತ, ವಾದಿಸಲಾಗದಿದ್ದವರಿಗೆ ಉತ್ತೇಜನ ನೀಡುತ್ತಿದ್ದರು. ರಾತ್ರಿ ೨ ಗಂಟೆಯವರೆಗೂ ತರ್ಕ ನಡೆದು, ನಂತರ ನಿದ್ರೆ. ನೋಡಿದೆಯಾ? ನಾವಿರುವಾಗಲೇ ನೀವು ಹೀಗೆ ಮಾಡುತ್ತೀರಿ. ಮುಂದೇನಾಗುವುದೋ ನೀನೇ ಊಹಿಸಿ ನೋಡು. ೧೦ ಗಂಟೆಗೇ ಎಲ್ಲರಿಗೂ ತೂಕಡಿಕೆ ಬಂತು. ಗೊರಕೆ ಹೊಡೆಯುತ್ತ ನಿದ್ರಿಸುವ ಬಯಕೆ! ಇಂದು ರಾತ್ರಿ ಊಟದ ಗೊಡವೆ ಇಲ್ಲ, ಆದ್ದರಿಂದ ಸ್ವಲ್ಪ ಶ್ರೀಮಾತೆಯವರ ನಾಮದ ಹಾಡು ಹಾಡೋಣವೆಂದುಕೊಂಡರೆ ಈ ಅವಸ್ಥೆ! ಬೇರೆ ದಿನ ಭೋಜನದ ಗಂಟೆ ಹೊಡೆದರೆ ನಿಮ್ಮನ್ನು ಯಾರು ತಾನೆ ತಡೆಯುವರು? ಊಟ ಹಾಗೂ ನಿದ್ರೆ! ಇದಕ್ಕಾಗಿ ಎಲ್ಲರೂ ಬಂದಿದ್ದೀರಾ?

''ಮಹಾರಾಜ್ (ಸ್ವಾಮಿ ಬ್ರಹ್ಮಾನಂದರ) ಮಾತುಗಳು 'ಉದ್ಬೋಧನ'ದಲ್ಲಿವೆ : ಯೋಗಿಗೆ ೪ ಗಂಟೆ ನಿದ್ರೆ, ಭೋಗಿಗೆ ೬–೮ ಗಂಟೆ ನಿದ್ರೆ. ನೀವು ಯೋಗಿಗಳು, ನೀವು ಭಗವಂತನನ್ನು ಪಡೆಯಬೇಕು. ನೀವು ಹೇಗೆ ನಿದ್ರಿಸುವಿರಂತೆ? ಭಗವಂತನನ್ನು ಪಡೆಯಬೇಕೆಂಬ ಬಯಕೆಯಿರುವವನು ಆತನನ್ನು ಪಡೆಯುವವರೆಗೆ ಹೇಗೆ ತಾನೆ ನಿಶ್ಚಿಂತನಾಗಿ ನಿದ್ರಿಸಬಲ್ಲ? 'ಅಯ್ಯೋ, ನನಗೆ ಇನ್ನೂ ಭಗವಂತನ ಸಾಕ್ಷಾತ್ಕಾರವಾಗಲಿಲ್ಲವಲ್ಲಾ!' ಎಂದು ಅವನ ಜೀವ ರೋದಿಸುವುದು. ಅವನಿಗೆ ಜೀವನವೆಲ್ಲ ಅಂಧಕಾರಮಯ, ಅವನಿಗೇನೂ ರುಚಿಸದು. ಭಗವಂತನ ನಾಮವನ್ನು ಹೇಳಲು ಸ್ಥಳ, ಕಾಲಗಳ ನಿಬಂಧನೆಯಿದೆಯೆ? ನಿನ್ನ ಗಡಿಯಾರ ಒಡೆದು ಬಿಸಾಕಿಬಿಡು – ಅವೆಲ್ಲ ಬಂಧನಗಳು. ಸೂರ್ಯ – ಸೂರ್ಯನಿಂದ ತಾನೇ ಸಮಯದ ಅರಿವು ಉಂಟಾಗುವುದು?.. ಇರಲಿ, ಹಾಡು.''

'ಹತ್ತು ಗಂಟೆ ಹೊಡೆಯಿತು' ಎಂದು ಹೇಳಿದ ಬ್ರಹ್ಮಚಾರಿಯೇ ಹಾಡಲಾರಂಭಿಸಿದ – **'ನಾಹಿ ಸೂರ್ಯ ನಾಹಿ ಜ್ಯೋತಿಃ..'** ಬಾಬಾಗೆ

ಇನ್ನು ಸುಮ್ಮನಿರಲಾಗಲಿಲ್ಲ. ಕುರ್ಚಿಯ ಮೇಲೆಯೇ ಮೊಣ ಕಾಲಿನ ಮೇಲೆ ತಬಲಾ ಇಟ್ಟುಕೊಂಡು, ತಾಳ ಹಾಕುತ್ತ ಮನ ಮೋಹಕ ಹಾಗೂ ಗಂಭೀರ ಸ್ವರದಲ್ಲಿ ಸ್ವಾಮೀಜಿ ರಚಿಸಿದ ಹಾಡು ಗಳನ್ನು ತಾವೇ ಹಾಡತೊಡಗಿದರು:

**೧. ನಾಹಿ ಸೂರ್ಯ, ನಾಹಿ ಜ್ಯೋತಿಃ ನಾಹಿ ಶಶಾಂಕ ಸುಂದರ,**
**ಭಾಶೇ ವ್ಯೋಮೇ ಛಾಯಾ ಸಮ ಛಬಿ ವಿಶ್ವೇ ಚರಾಚರ**

**೨. ಏಕರೂಪ ಅರೂಪ - ನಾಮ ವರಣ,**
**ಅತೀತ -ಆಗಾಮೀ - ಕಾಲ - ಹೀನ**
**ದೇಶಹೀನ, ಸರ್ವಹೀನ - ನೇತಿ ನೇತಿ ವಿರಾಮ ಯಥಾಯ್ । ..**
**ಜೇಯ್ ಸೂರ್ಯ ತಾರೀ ಕಿರಣ್; ಸೇಯಿ ಸೂರ್ಯ ಸೇಯಿ ಕಿರಣ್**

ಮತ್ತೆ ಮತ್ತೆ ಈ ಸಾಲನ್ನು ಅದೆಷ್ಟು ಬಾರಿ ಹಾಡಿದರೋ! ಎಲ್ಲರೂ ಗಂಭೀರ, ಶಾಂತ ಮೌನದಿಂದ ಕುಳಿತಿದ್ದಾರೆ. ಮಧ್ಯ ರಾತ್ರಿಯಾಗುತ್ತಿದೆ. ಗಡಿಯಾರ 'ಢಣ ಢಣ' ಎಂದು ೧೨ ಗಂಟೆ ಬಾರಿಸಿತು. ಬಾಬಾ ಮತ್ತೆ ತಬಲಾ ತಾಳದೊಂದಿಗೆ ಹಾಡ ಲಾರಂಭಿಸಿದರು.

**೧) ತಾಥೈಯಾ ತಾಥೈಯಾ ನಾಚೇ ಭೋಲಾ । ಬಂ ಬಬ ಬಾಜೇ ಗಾಲ**
**ಡಿಮಿ ಡಿಮಿ ಡಿಮಿ ಡಮರು ಬಾಜೇ ದುಲಿಛೆ ಕಪಾಲ ಮಾಲಾ ॥..**

*(ಅದೋ ಅಲ್ಲಿ ಪರಮಶಿವನು ನರ್ತಿಸುವನು ಮೋದದಿ...*
*ಕೊರಳ ಸುತ್ತ ಮುಂಡಮಾಲೆ..)*

-ಸ್ವಲ್ಪ ಸಮಯ ಈ ಎರಡು ಸಾಲುಗಳನ್ನು ಮಾತ್ರವೆ ಹಾಡಿದರು.

**೨) ನಾಚೆ ಬಾಹು ತುಲೇ ಭೋಲಾ ಭಾವೇ ಭೂಲೇ...**
*(ಭಾವದಿಂದ ಮೈ ಮರೆತು ಪರಮಶಿವನು ನರ್ತಿಸುವನು..)*

ಈ ಹಾಡಿನ ಒಂದೆರಡು ಪಲ್ಲವಿಗಳನ್ನು ಹಾಡುತ್ತಿದ್ದಂತೆ ಅವರ ಮುಖದಲ್ಲಿ ಮುಗುಳ್ನಗೆ ಹೊರಸೂಸಿತು. ಅವರ ಕೂದಲುಗಳು ಜಟೆಯಂತೆ ಕೆಳಗಿಳಿದು ಜೋಲಾಡುತ್ತಿದೆ, ಅವರು ಭಾವುಕರಾಗಿ ತಲೆಯಾಡಿಸುತ್ತಿದ್ದಾರೆ. ದೃಷ್ಟಿ ಅರ್ಧನಿಮೀಲಿತವಾಗಿದೆ, ಸಾಕ್ಷಾತ್ ಶಿವನೇ ಭಾವೋನ್ಮತ್ತನಾಗಿರುವಂತೆ. ಹಾಡಿನ ಪ್ರತಿಯೊಂದು ಸಾಲನ್ನೂ ತಡೆತಡೆದು ಅವರು ಹಾಡುತ್ತಿದ್ದಾರೆ. ಎಂತಹ ಸುಂದರ, ಅಪೂರ್ವ ದಿವ್ಯಮೂರ್ತಿ! ಮನುಷ್ಯನೇ ಅಲ್ಲವೆಂಬಂತೆ! ಹಠಾ ತ್ತನೆ ಮತ್ತೆ ಉನ್ಮತ್ತರಾಗಿ, ತಲೆಯಾಡಿಸಿ ಕೂದಲೆಲ್ಲ ಮುಖದ ಮೇಲೆ ಜೋತಾಡುತ್ತಿದ್ದಂತೆ ಹಾಡತೊಡಗಿದರು, **'ತಾಥೈಯಾ ತಾಥೈಯಾ ನಾಚೇ ಭೋಲಾ। ಬಂ ಬಬ ಬಾಜೇ ಗಾಲಾ..'** ಜೊತೆಯಲ್ಲಿ ಹಾಡುವಂತೆ ಎಲ್ಲರಿಗೂ ಆದೇಶಿಸಿದರು. ಈ ಹಾಡನ್ನೇ ಅವರು ಬಹಳ ಹೊತ್ತು ಹಾಡಿದರು. ಸ್ವಲ್ಪ ಕಾಲ ಬಾಬಾ ಮೌನ ತಾಳಿದರು. ಉಳಿದವರೆಲ್ಲರೂ ಹಾಡುತ್ತಿದ್ದರಯ. ಹಾಡು ನಿಂತಾಗ ಬಿಗಿದ ಗಂಟಲಿನಲ್ಲಿ ಬಾಬಾ ಮತ್ತೆ ಹಾಡತೊಡಗಿದರು.

**೧) ಮನೇರ್ ಕಥಾ ಕಹಿಬೇ ಕೀ ಶೇಯಿ....**
**ದರದೀ ಬಿನೇ ಪ್ರಾಣ್ ಬಾಚೇ ನಾ**

*(ಎಂತೊರೆಯಲಿ ಸಖಿ ನನ್ನದೆಯೊಳಗನು....*
*ನನ್ನೀ ವ್ಯಥೆಗನುಕಂಪಿಸುವುದೆ ಎಲ್ಲಿದೆ...)*

**೨) ರಾಂಗಾ ಜಬಾ ಕೇ ದಿಲೊ....**
**ಪೊರಿಯೇ ದೇ ನಾ ಮಾಥಾಯ್ ದುಟೊ**

*(ರಂಗುರಂಗಿನ ಹೂವನಾರಿಟ್ಟರಮ್ಮಾ ನಿನ್ನಡಿಗೆ? ಅವುಗಳೆರಡನ್ನೂ ಇಡಬಾರದೇ ನೀನು ನನ್ನ ಮುಡಿಗೆ?)*

''ಆಹ! ಠಾಕೂರರ ಬಳಿ ಈ ಹಾಡುಗಳನ್ನು ಹಾಡುತ್ತ ರಾತ್ರಿ ಯೆಲ್ಲ ಕಳೆದಿದ್ದೇವೆ. ಅಯ್ಯೋ! ಈ ನಿದ್ರೆಯೆಂಬುದೇ ಮನುಷ್ಯ ನಿಗೆ ಎಲ್ಲವನ್ನೂ ಮರೆಸಿರುವುದು; ಮನುಷ್ಯನನ್ನು ಅದು ಪ್ರಜ್ಞಾ ಶೂನ್ಯನನ್ನಾಗಿ ಮಾಡಿದೆ. ಠಾಕೂರರೆನ್ನುತ್ತಿದ್ದರು, 'ಮನುಷ್ಯನಾಗ ಬೇಕಾದರೆ 'ಮಾನ್-ಹುಶ್' ಆಗಬೇಕು (ಅಂದರೆ, ಆತ್ಮಗೌರವ ಜಾಗೃತವಾಗಬೇಕು). ಹೀಗಾಗಬೇಕಾದರೆ ಆತನನ್ನು, 'ದೀರ್ಘ ಕಾಲ ಪ್ರಾರ್ಥಿಸಲು ಅನುಕೂಲವಾಗುವಂತೆ ನಿದ್ರೆಯನ್ನು ಕಡಿಮೆ ಮಾಡಿಸು' ಎಂದು ಪ್ರಾರ್ಥಿಸು. ಠಾಕೂರರು ರಾತ್ರಿಯೆಲ್ಲ ಸೊಳ್ಳೆ ಪರದೆಯ ಒಳಗೆ ಕುಳಿತುಕೊಂಡು ಭಗವಂತನನ್ನು ಪ್ರಾರ್ಥಿಸು ತ್ತಿದ್ದರು. ಅವರು ನಿದ್ರಿಸುತ್ತಿದ್ದಾರೆಂದು ಜನ ಭಾವಿಸುತ್ತಿದ್ದರು. ಅವರಿಗೆ ನಿದ್ರೆಯೆಂಬುದೇ ಇರಲಿಲ್ಲ. ಅವರ ಬಳಿಗೆ ಹೋದವರೂ ಕೂಡ 'ನಿದ್ರೆಯನ್ನೇ ನಿದ್ರೆಗೆ ಅಟ್ಟಿಬಿಟ್ಟಿದ್ದರು.' ಇನ್ನು ನನ್ನದೇನು ಹೇಳಲಿ? ಅವರೆದುರು ನಾನು ಅಲ್ಪವ್ಯಕ್ತಿ - ನನಗೆ ೨ ಗಂಟೆಗಳಿಗಿಂತ ಹೆಚ್ಚು ಸಮಯ ನಿದ್ರಿಸಲಾಗುವುದಿಲ್ಲ. ಹೆಚ್ಚುಕಾಲ ನಿದ್ರಿಸಿದರೆ ನನಗೆ ನಾಚಿಕೆಯೆನಿಸುತ್ತದೆ. ನಿಮಗಾದರೋ, ಮುಂಜಾನೆಯೇ ಎದ್ದು ಕುಳಿತು ಸ್ವಲ್ಪ ಠಾಕೂರರ ನಾಮಜಪ ಮಾಡೋಣ ಎಂದು ಅನ್ನಿಸುವುದೇ ಇಲ್ಲ. ಏನಿದು? ನಮಗೆ ಮಠದಲ್ಲಿ ಮಂಗಳಾ ರತಿಯ ನಂತರ ಮಲಗಲು ತುಂಬಾ ನಾಚಿಕೆಯಾಗುತ್ತಿತ್ತು. 'ಠಾಕೂರರು ಎದ್ದುಬಿಟ್ಟಿದ್ದಾರೆ, ನಾನಿನ್ನೂ ಮಲಗಿಯೇ ಇದ್ದೇ ನಲ್ಲಾ, ಛಿ ಛಿ!' ಎಂದು ಅಲ್ಲೇ ಮೈಮುರಿದು ಎದ್ದುಬಿಡುತ್ತಿದ್ದೆ.

''ಆದರೆ ಶರೀರಕ್ಕೆ ಆಹಾರದ ಅಗತ್ಯವಿದ್ದಂತೆಯೇ ನಿದ್ರೆ ಕೂಡ ಬೇಕು. ನೀವು ನಮ್ಮ ಬಳಿಗೆ ಬಂದಿದ್ದೀರಿ - ಠಾಕೂರರ ಮಕ್ಕಳ ಹತ್ತಿರ - ಯಾರು ನಿದ್ರೆಯನ್ನೇ ನಿದ್ರೆಗೆ ಅಟ್ಟಿದ್ದರೋ ಅವರ ಹತ್ತಿರ; ಅವರಿಂದ ನೀವು ಕಲಿತದ್ದಾದರೂ ಏನು? ಸ್ವಲ್ಪ ವಾದರೂ ಕಲಿಯಿರಿ. (ಆಗ ರಾತ್ರಿ ೧.೩೦ ಗಂಟೆ) ಸ್ವಲ್ಪ ರಾತ್ರಿ ಆಗಿಹೋಗಿದೆಯೆಂದು ನೀವೆಲ್ಲ ಎದ್ದು ಹೋಗಲು ಚಡಪಡಿಸು ತ್ತಿದ್ದೀರಿ! ನಾನಾದರೋ ಮುದುಕ! ಇದು ಅಸ್ವಸ್ಥ ದೇಹ; ದಿನ ವೆಲ್ಲಾ ಉಪವಾಸವಿದ್ದೇನೆ. ಕುರ್ಚಿಗೊರಗಿಕೊಂಡು ನಿಮಗಾಗಿ ಕುಳಿತಿದ್ದೇನೆ. ಹಾಡುಗಳನ್ನು ಕೇಳುತಿದ್ದೇನೆ, ನಾನೇ ಸ್ವತಃ ಹಾಡು ತ್ತಿದ್ದೇನೆ, ಇಷ್ಟೊಂದು ಬಯ್ಯುತ್ತಿದ್ದೇನೆ - ಆದರೂ ನಾನು ಆಯಾಸಗೊಂಡಿಲ್ಲ, ಸ್ವಲ್ಪವೂ ತೂಕಡಿಸುತ್ತಿಲ್ಲ. ಇದೆಲ್ಲಾ ಆದ ಮೇಲೆ ಇನ್ನೇನು ನಿದ್ರೆ? ನೀವಾದರೋ ಬೆಳಗ್ಗೆ ೭ ಗಂಟೆಯ ವರೆಗೂ ನಿಶ್ಚಿಂತೆಯಿಂದ ನಿದ್ರಿಸುತ್ತೀರಿ.

ಬಾಬಾ ಸ್ವಲ್ಪ ತಡೆದು ಮತ್ತೆ ಹೇಳುತ್ತಿದ್ದಾರೆ: '' 'ಭಾವದ ಅಂತರಂಗವರಿತ ವ್ಯಕ್ತಿಯೊಬ್ಬನು ದೊರೆತಿದ್ದಾನೆ; ಇರುಳಿಲ್ಲದ ಬೆಳಕಿನ ಊರಿನಿಂದ ಬಂದವನನ್ನು ನಾನು ಪಡೆದಿದ್ದೇನೆ.' ಇದನ್ನು ಕೇಳಿ. ನೀವು ಅನಂತವನ್ನು ಪಡೆಯಲು ಬಂದಿದ್ದೀರಿ. ಗಡಿಯಾರವನ್ನೇಕೆ ನೋಡುತ್ತೀರಿ? ಗಡಿಯಾರವೆಂದರೆ ಗಡುವನ್ನು ಸೂಚಿಸುತ್ತದೆ – ಬಂಧನ. Time (ಸಮಯ) ಎಂದರೆ relative (ಸಾಪೇಕ್ಷ). ಅನಂತವನ್ನು ಪಡೆಯಲಿಚ್ಛಿಸಿದರೆ ಈ ಭಾವಗಳನ್ನೆಲ್ಲ ದೂರ ಮಾಡಬೇಕು. ಹಗಲು-ರಾತ್ರಿ, ನಿಮಿಷ -ಗಂಟೆ ಇವೆಲ್ಲ ಎಲ್ಲಿಯತನಕ? ಈ ಭೂಮಿ ಚೆನ್ನಾಗಿರುವುದು ಸೂರ್ಯ ಬೆಳಗುವತನಕ. ಸೂರ್ಯನ ಬೆಳಗುವಿಕೆ ಎಷ್ಟರದು? ಈ ಅನಂತ ವಿಶ್ವದಲ್ಲಿ ಎಷ್ಟೆಷ್ಟೋ ಸೂರ್ಯಗಳಿವೆ. ಒಂದೊಂದು ನಕ್ಷತ್ರವೂ ಸೂರ್ಯನಿಗಿಂತ ಎಷ್ಟೋ ದೊಡ್ಡದು. Sirius (ಲುಬ್ಧಕ) ಮುಂತಾದ ಉಜ್ವಲ ನಕ್ಷತ್ರಗಳು ದೂರದಲ್ಲಿ ಬೇರೆ ಬೇರೆ ಸ್ತರಗಳಲ್ಲಿ ವ್ಯವಸ್ಥಿತವಾಗಿವೆ. Galactic system, nebula (ಆಕಾಶಗಂಗೆ, ನೀಹಾರಿಕೆ) ಇವುಗಳಲ್ಲಿ ಪ್ರತಿಯೊಂದರಿಂದಲೂ ಎಷ್ಟೊಂದು ಸೂರ್ಯಂದಿರು ಹುಟ್ಟುತ್ತಾರೆ! ಅಲ್ಲಿ time ಇದೆಯೆನು? Time ಇನ್ನೂ ಅಲ್ಲಿ ಹುಟ್ಟಿಲ್ಲ.

''ನಾವು ಭೂಮಿಯಿಂದಾಚೆ ಹೋಗುತ್ತಿದ್ದೇವೋ ಎಂಬಂತೆ ಧ್ಯಾನಿಸುತ್ತಿದ್ದೆವು. ಭೂಮಿ ನಮ್ಮಿಂದ ಬಹುದೂರ ಸರಿದು ಹೋಗುತ್ತಿರುವಂತೆ ಭಾಸವಾಗುತ್ತಿತ್ತು . ನಾನು? ಇತ್ತ ನೋಡಿದರೆ ಅನಂತಕೋಟಿ ನಕ್ಷತ್ರಗಳು, ಬೆಳಕಿನ ಕಣಗಳು, ವಿದ್ಯುತ್ ವೇಗದಲ್ಲಿ ಬೆಳಕಿನ ವೇಗದಲ್ಲಿ – light ನ velocity ಯಲ್ಲಿ; ಜಡಜಗತ್ತಿನಲ್ಲಿ ಇಂದಿನವರೆಗೂ ಎಷ್ಟು ವೇಗವಾಗಿ ಹೋಗಲಾಗಿಲ್ಲವೋ ಅದಕ್ಕಿಂತಲೂ ವೇಗವಾಗಿ ಸಂಚರಿಸಿದೆ; ಯಾವ ಎಲ್ಲೆ, ಸೀಮೆಗಳೂ ಇಲ್ಲದ ಒಂದು ದಿಕ್ಕಿನಲ್ಲಿ ಸಾಗಿದೆ. ಎಷ್ಟು ದೂರ ಹೋದರೂ ಒಂದೇ ರೀತಿ, periodic ವೇಗ (ಮತ್ತೆ ಮತ್ತೆ ಅದೇ ಸ್ಥಿತಿಯ ಪರಿವರ್ತನೆ). ಇತ್ತ ತೃಪ್ತಿಯಿಲ್ಲ , ಶಾಂತಿಯಿಲ್ಲ. ಮತ್ತೆ ಪ್ರಚಂಡ ವೇಗದಲ್ಲಿ ವಿರುದ್ಧ ದಿಕ್ಕಿನಲ್ಲಿ ಹೋದೆ, ಅಲ್ಲಿಯೂ ಇದೇ ರೀತಿ – ಎಲ್ಲೆಡೆ ಇದೇ ಸ್ಥಿತಿ.

''ಆಗ? ನಿಧಾನವಾಗಿ, ಸ್ಥಿರವಾಗಿ, ಸ್ಪಂದನೆಯೇ ಇಲ್ಲದ ಸ್ಥಿತಿ! ಅನಂತಕ್ಕೆ ಎಲ್ಲೆ ಇದೆಯೆ? ಇದು macrocosm (ವಿಶಾಲ ವಿಶ್ವ ಬ್ರಹ್ಮಾಂಡ)ನ ವಿಚಾರ. ನಂತರ microcosm ವಿಚಾರ-ಅಣು-ಪರಮಾಣು. ಅದರೊಳಗೂ ಮತ್ತೆ ಕೋಟಿ ಜಗತ್ತುಗಳು ಆಟವಾಡುತ್ತಿವೆ. ಇವನ್ನೆಲ್ಲ ಯೋಚಿಸಿದಾಗ ಮನಸ್ಸು ತಾನಾಗಿಯೇ ಸ್ಥಿರವಾಗುತ್ತದೆ, ಸಮಯದ ಪ್ರಜ್ಞೆ ಹೊರಟುಹೋಗುತ್ತದೆ, ಸಮಯ ಸ್ತಬ್ಧವಾಗುತ್ತದೆ. ನಿಜವಾಗಿಯೂ ಹೇಳುತ್ತೇನೆ, ಎಷ್ಟೋ ದಿನ ಹೀಗಾಗಿವೆ.

''ಲೆಕ್ಕಾಚಾರ ಮಾಡುವವರಿಗೆ – calcuating ಪ್ರವೃತ್ತಿಯವನಿಗೆ ಎಂದೂ ಅನಂತದ ಗ್ರಹಿಕೆ ಸಾಧ್ಯವಾಗದು; ಭಗವಂತನ ಸಾಕ್ಷಾತ್ಕಾರವಾಗದು. (calcuation) ಲೆಕ್ಕಾಚಾರ ಇರುವವರೆಗೂ time and space (ಕಾಲ-ದೇಶ), ಮಾಯೆಯ ಸಾಮ್ರಾಜ್ಯ ಅರಿವಿಗೆ ಬರುತ್ತದೆ. ಸತ್ಯ ಅದರಿಂದ ಬಹಳ ದೂರ. 'ಹತ್ತುಗಂಟೆಯಾಗಿದೆ, ನಿದ್ರಿಸಬೇಕು' ಎಂಬ ಈ ಭಾವ ನಮಗಿರಲಿಲ್ಲ.''

ರಾತ್ರಿ ೨ ಗಂಟೆಯಾಗಿದೆ. ಒಬ್ಬೊಬ್ಬರಾಗಿ ಎಲ್ಲರೂ ಹೊರಟು ಹೊದರು. ಇಬ್ಬರು ಸೇವಕರು ಎರಡು ಕಡೆಯಲ್ಲಿ ಹಿಡಿದುಕೊಂಡು ಬಾಬಾ ಅವರನ್ನು ಕುರ್ಚಿಯಿಂದ ಎಬ್ಬಿಸಿದರು. ಬಹುಶಃ ಬಲವಂತವಾಗಿ ಮಲಗಿಸಿರಬೇಕು. ಮಲಗುತ್ತ ಬಾಬಾ ಹೇಳತೊಡಗಿದರು: ''ಇಷ್ಟರ ತನಕ ಈ ದೇಹದಲ್ಲಿ ಯಾವ ತೊಂದರೆಯೂ ಇರಲಿಲ್ಲ. ಈಗ ಮತ್ತೆ ನೋವಿನ ಅನುಭವವಾಗುತ್ತಿದೆ. ಇಲ್ಲಿಯತನಕ ಚೆನ್ನಾಗಿದ್ದೆ. ಅವೆಲ್ಲ ಇರಲಿಲ್ಲ.''

ಸೇವಕರು ಸೊಳ್ಳೆಪರದೆ ಕಟ್ಟಿ, ಮೋಂಬತ್ತಿಯ ದೀಪವನ್ನಾರಿಸಿ ಬಾಬಾ ಹಾಡಿದ ಅದ್ಭುತ ಭಾವಪೂರ್ಣ ಹಾಡುಗಳು ಹಾಗು ಮಾತುಗಳನ್ನು ನೆನೆಯುತ್ತ ಮಲಗಲು ಹೋದರು. ಕೃಷ್ಣಪಕ್ಷದ ಸಪ್ತಮಿಯ ಚಂದ್ರ ಆಕಾಶದಲ್ಲಿ ಬಹಳ ಹೊತ್ತಿನಿಂದ ಪ್ರಕಾಶಿಸುತ್ತಿದ್ದಾನೆ. ಸುಪ್ತವಾದ, ವಿಶ್ರಾಂತಿಯ ಅಂಧಕಾರದಲ್ಲಿ ನೀರವತೆಯ ಶಾಂತಿ ಹಾಗು ಬೆಳಕನ್ನು ಚೆಲ್ಲಿದ್ದಾನೆ. ಆಶ್ರಮವಿಡೀ ಅಸಾಧಾರಣ ಗಂಭೀರ ಭಾವ ಆವರಿಸಿದೆ. *(ಮುಂದುವರಿಯುವುದು)*

**ಶ್ರೀಮಾತೆಯವರ ವಿಶಾಲ ಮಡಿಲು**

ಶ್ರೀಮಾತೆಯವರನ್ನು ಯಾರು ಅರ್ಥಮಾಡಿಕೊಂಡಿರುವರು? ಅಲ್ಲಿ ಯಾವುದೇ ವೈಭವದ ಸುಳಿವೂ ಇಲ್ಲ. ಶ್ರೀರಾಮಕೃಷ್ಣರಲ್ಲಾದರೂ ವಿದ್ಯೆಯ ಐಶ್ವರ್ಯವಿತ್ತು. ಆದರೆ ಶ್ರೀಮಾತೆಯವರಲ್ಲಿ? ಅವರಲ್ಲಿ ಈ ಐಶ್ವರ್ಯವೂ ಲುಪ್ತವಾಗಿದೆ. ಇದೆಂಥ ಮಹಾಶಕ್ತಿ! ನಾವು ಯಾವ ವಿಷವನ್ನು ಸ್ವೀಕರಿಸಲಾರೆವೊ ಅದನ್ನು ಶ್ರೀಮಾತೆಯವರೆಡೆಗೆ ಕಳಿಸುತ್ತೇವೆ. ಶ್ರೀಮಾತೆಯವರು ಎಲ್ಲವನ್ನೂ ಸ್ವೀಕರಿಸುತ್ತಾರೆ. ಅನಂತಶಕ್ತಿ, ಅಪಾರ ಕರುಣೆ! ನಮ್ಮ ವಿಚಾರ ಬಿಡು, ಸ್ವಯಂ ಶ್ರೀರಾಮಕೃಷ್ಣರೂ ಹೀಗೆ ಮಾಡುವುದನ್ನು ನಾವು ನೋಡಿರಲಿಲ್ಲ. ಅವರು ಎಷ್ಟೊಂದು ಅಳೆದು ಸುರಿದು ಪರೀಕ್ಷೆ ಮಾಡಿ ಜನರನ್ನು ಸ್ವೀಕರಿಸುತ್ತಿದ್ದರು! ಮತ್ತೆ ಇಲ್ಲಿ? ಇಲ್ಲಿ ಶ್ರೀಮಾತೆಯವರಲ್ಲಿ ಏನು ನೋಡುತ್ತಿರುವೆ? ಅದ್ಭುತ! ಅದ್ಭುತ! ಎಲ್ಲರಿಗೂ ಆಶ್ರಯ ನೀಡುತ್ತಾರೆ, ಯಾರು ಕೊಟ್ಟಿದ್ದನ್ನಾದರೂ ತಿನ್ನುತ್ತಾರೆ, ಮತ್ತೆ ಎಲ್ಲವನ್ನೂ ಜೀರ್ಣಿಸಿಕೊಳ್ಳುತ್ತಾರೆ. ತಾಯಿ! ತಾಯಿ! ನಿನಗೆ ಜಯವಾಗಲಿ! ಸುಖ-ದುಃಖಗಳಲ್ಲಿ ಸಂಪತ್ತು-ವಿಪತ್ತುಗಳಲ್ಲಿ , ಕ್ಷಾಮ-ಡಾಮರಗಳಲ್ಲಿ , ಯುದ್ಧ-ಕ್ರಾಂತಿಗಳಲ್ಲಿ ಎಲ್ಲ ಸಂದರ್ಭಗಳಲ್ಲಿ ಶ್ರೀಮಾತೆಯವರ ಆ ಅಪಾರ ಕರುಣೆಯನ್ನು ನೆನಪಿಸಿಕೊ.

– ಸ್ವಾಮಿ ಪ್ರೇಮಾನಂದ

# ಮಾಯೆಯೊಳಗೆ ಮಹಾಮಾಯೆ

ಪ್ರವ್ರಾಜಿಕಾ ಧರ್ಮಪ್ರಾಣಾ

ಸಾಕ್ಷಾತ್ ಜಗನ್ಮಾತೆಯೆಂದೇ ಪೂಜಿಸಲ್ಪಟ್ಟ ಶ್ರೀಮಾತೆಯವರ ದೈವೀವ್ಯಕ್ತಿತ್ವದ ಅಗೋಚರ ನೆಲೆಗಳಲ್ಲಿ ಒಂದು ಅಧ್ಯಾಯದಂತೆ ಬಂದು ಹೋಗುವ ಪಾತ್ರ ರಾಧುವಿನದು. ಮಾನವಕೋಟಿಯ ಮೇಲೆ ಕೃಪೆ ತೋರಲು ಮಾಯೆಯನ್ನು ಆಧರಿಸಿಕೊಂಡು, ತಮ್ಮ ಮಾನವಲೀಲೆಯನ್ನು ಪೂರೈಸಿದ ಶ್ರೀಮಾತೆಯವರ ಈ ಲೀಲಾಸಹಾಯಕಿಯನ್ನು ಕುರಿತು ಬರೆದಿರುವ ಲೇಖಕಿ, ಚಿಕ್ಕಮಗಳೂರು ಶ್ರೀ ಶಾರದಾ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಅವತಾರ ವರಿಷ್ಠರಾದ ಶ್ರೀರಾಮಕೃಷ್ಣರ ಜೀವನವು ಒಂದು ವಿಶಿಷ್ಟ ರೀತಿಯಿಂದಿದ್ದರೆ, ಶ್ರೀಶಾರದಾ ದೇವಿಯವರ ಜೀವನವು ಇನ್ನೂ ಗೂಢವಾಗಿರುವಂತಿದೆ. ಸಾಧಾರಣ ಸ್ತ್ರೀಯಂತಿದ್ದು, ಆದರೆ ಸದಾ ಸ್ವಸ್ವರೂಪದಲ್ಲೇ ನೆಲೆಸಿದ್ದ ಅವರನ್ನು ಸಾಧಾರಣ ಜನರಿಗೆ ಮಾತ್ರವಲ್ಲ ಅವರ ಸಖಿಯರಂತಿದ್ದು, ಶ್ರೀರಾಮಕೃಷ್ಣರ ಶಿಷ್ಯೆಯರಾಗಿ ಮಹಾಸಾಧಕಿಯರಾಗಿದ್ದ ಯೋಗಿನ್‌ಮಾ, ಗೋಲಾಪ್‌ಮಾ ಇವರಿಗೂ ಅರಿಯಲು ಸಾಧ್ಯವಾಗಿರಲಿಲ್ಲ. ಶ್ರೀರಾಮಕೃಷ್ಣರು ಆಗಾಗ ಗಾಢಸಮಾಧಿಗೆ ಹೋಗಿ, ತನ್ನ ಸ್ವಸ್ವರೂಪವಾದ ಸಚ್ಚಿದಾನಂದ ಸಾಗರದಲ್ಲಿ ಮುಳುಗಿ ಆನಂದಿಸಿ, ಮತ್ತೆ ಈ ಪ್ರಪಂಚಕ್ಕೆ ಬರಲು ಮನಸ್ಸನ್ನು ಇಳಿಸುವುದಕ್ಕಾಗಿ 'ನೀರು ಕುಡಿಯುತ್ತೇನೆ' ಅಥವಾ 'ಸಿಹಿತಿಂಡಿ ತಿನ್ನುತ್ತೇನೆ' ಎಂದು ಹೇಳುತ್ತಿದ್ದರು. ಆಮೇಲೆ ಭಕ್ತರೊಂದಿಗೆ ಒಂದಾಗಿ ಮಾತನಾಡುತ್ತಿದ್ದರು. ಆದರೆ ಶ್ರೀಮಾತೆಯವರು ನಿರಂತರವಾಗಿ ತಮ್ಮ ನಿಜ ಸ್ವರೂಪದಲ್ಲೇ ಸ್ಥಾಯಿಯಾಗಿರುತ್ತಿದ್ದರು ಮತ್ತು ಈ ಪ್ರಪಂಚಕ್ಕೆ ಸಾಕ್ಷೀಭೂತರಾಗಿದ್ದರು. ಆದುದರಿಂದ ಅವರ ಸ್ಥಾನವು ಅಗೋಚರವಾಗಿದ್ದು, ನೋಡಿದವರಿಗೆ ಏನೂ ಅರ್ಥವಾಗುತ್ತಿರಲಿಲ್ಲ. ಜಗಜ್ಜನನಿಯಾದ ಈ ಮಹಾಶಕ್ತಿ ತನ್ನ ಸ್ವಸ್ವರೂಪದಲ್ಲೇ ನೆಲೆಸಿ, ತನ್ನ ಯೋಗಮಾಯೆಯನ್ನೇ ಅವಲಂಬಿಸಿ ಈ ಮಾಯಾಜಗತ್ತಿನಲ್ಲಿ ಜೀವಿಸಿ, ಜನರನ್ನು ಉದ್ಧರಿಸಿದರು. ಆ ದಿವ್ಯಜೀವನ ನಿಜವಾಗಿಯೂ ಅದ್ಭುತವಾಗಿತ್ತು. ಆದರೆ, ನೋಡಿದವರಿಗೆ ಅವರ ದಿವ್ಯತ್ವದಲ್ಲಿ ಸಂಶಯವುಂಟಾಗುವಂತಿತ್ತು. ಜೀವಿಗಳ ದಿವ್ಯ ಚೈತನ್ಯವನ್ನು ಜಾಗೃತಗೊಳಿಸಿ, ಭವಬಂಧನದಿಂದ ಮುಕ್ತಿಯನ್ನು ನೀಡಲು ಈ ಮಹಾಮಾಯೆಗೆ ಯೋಗಮಾಯೆ ಹೇಗೆ ಸಹಕರಿಸಿದಳೆಂದರೆ –

ಶ್ರೀರಾಮಕೃಷ್ಣರ ಮಹಾಸಮಾಧಿಯ ನಂತರ ಶ್ರೀಮಾತೆಯವರು ಈ ಜಗತ್ತಿನಿಂದ ತಾವೂ ನಿರ್ಗಮಿಸಬೇಕೆಂದು ನಿರ್ಧರಿಸಿದ್ದರು. ಶ್ರೀರಾಮಕೃಷ್ಣರೇ ಅವರ ಸರ್ವಸ್ವರಾಗಿದ್ದರು. ಅವರಿಲ್ಲದ ಈ ಜಗತ್ತು ಅವರಿಗೆ ಶೂನ್ಯವಾಯಿತು. ಆದರೆ ಶ್ರೀ ರಾಮಕೃಷ್ಣರು ಅವರಿಗೆ ಆಗಾಗ ದರ್ಶನವನ್ನು ನೀಡಿ ಸಮಾಧಾನಪಡಿಸುತ್ತಾ ತಮ್ಮ ಅವತಾರದ ಉದ್ದೇಶವನ್ನು ಮುಂದುವರಿಸಲು ನಿರ್ದೇಶಿಸಿದ್ದರು. ಆದರೆ ತಮ್ಮ ಮುಂದೆ ಯಾವ ದಾರಿಯೂ ಕಾಣದೆ ಶ್ರೀಮಾತೆ ಕೆಲವು ಕಾಲ ಕಾಮಾರಪುಕುರದಲ್ಲಿದ್ದು, ಆ ಬಳಿಕ ತಮ್ಮ ಶಿಷ್ಯರ ಬೇಡಿಕೆಯಂತೆ ಕಲ್ಕತ್ತದಲ್ಲಿದ್ದು, ಆಗಾಗ



ಶ್ರೀಮಾತೆ ಮತ್ತು ರಾಧು

ಜಯರಾಂಬಾಟಿಗೆ ಹೋಗಿ ಬಂದು ಮಾಡುತ್ತಿರುತ್ತಿದ್ದರು. ತೀವ್ರ ವೈರಾಗ್ಯದಿಂದ ತುಂಬಿದ ಅವರ ಮನಸ್ಸು ಸದಾ ಅನಂತತೆಯಲ್ಲಿ ನೆಲೆಸಿತ್ತು.ಆದರೂ ಅವರ ಹೃದಯವು ಶ್ರೀರಾಮಕೃಷ್ಣರ ಶಿಷ್ಯರಿಗಾಗಿ ತುಡಿಯುತ್ತಿದ್ದು, ಶ್ರೀರಾಮಕೃಷ್ಣರ ಸಂದೇಶವನ್ನು ಸಾರಲು ಅವರನ್ನು ಪ್ರೋತ್ಸಾಹಿಸುತ್ತಿದ್ದರು. ಆದರೆ ಶ್ರೀಮಾತೆ ಸದಾ ತಮ್ಮ ಸ್ವಧಾಮಕ್ಕೆ ತೆರಳಲು ತವಕಿಸುತ್ತಿದ್ದರು. ಅಷ್ಟರಲ್ಲಿ ಒಂದು ದಿನ ಶ್ರೀರಾಮಕೃಷ್ಣರು ಅವರಿಗೆ ದರ್ಶನ ನೀಡಿ, ಒಬ್ಬ ಬಾಲಿಕೆಯನ್ನು ತೋರಿಸಿ, ''ಇವಳನ್ನು ಆಶ್ರಯಿಸಿ ಜಗತ್ತಿನಲ್ಲಿರು'' ಎಂದು ಹೇಳಿ ಅದೃಶ್ಯರಾದರು. ಆ ಬಾಲಿಕೆಯೂ ಕಾಣದಾದಳು. ಅಂದು ಶ್ರೀಮಾತೆಗೆ ಅದರ ಅಂತರಾರ್ಥ ತಿಳಿಯಲಿಲ್ಲ. ಇದಾದ ಕೆಲವು ವರ್ಷಗಳಲ್ಲಿ ಅವರ ಕಿರಿಯ ಸಹೋದರ ಅಭಯನು ಕಾಯಿಲೆಯಿಂದ ಮಲಗಿದನು. ಮರಣಶಯ್ಯೆಯಲ್ಲಿದ್ದ ಅವನು ಕೊನೆಯ ದಿನ ಶ್ರೀಮಾತೆಯ ಮಡಿಲಲ್ಲಿ ತಲೆಯನ್ನಿಟ್ಟು, ಅವರನ್ನೇ ಎವೆಯಿಕ್ಕದೆ ನೋಡುತ್ತಾ ಮಲಗಿದ್ದ. ಶ್ರೀಮಾತೆಯೂ ಅವನ ತಲೆ ಸವರುತ್ತಾ ನೋಡುತ್ತಿದ್ದರು. ಅಭಯನು ಸದ್ಯದಲ್ಲೇ ಮಗು

ವಾಗಲಿರುವ ತನ್ನ ಪತ್ನಿಯನ್ನು ನೆನೆಸಿ ಕಣ್ಣೀರಿಡುತ್ತಾ , ''ಅಕ್ಕಾ ಇವರೆಲ್ಲರ ಭಾರವನ್ನು ನಿನಗೆ ಒಪ್ಪಿಸುತ್ತಿದ್ದೇನೆ.. ನೀನೇ ಅವರ ನ್ನೆಲ್ಲಾ ನೋಡಿಕೋ...'' ಎಂದು ಹೇಳಿ ಕೊನೆಯುಸಿರೆಳೆದನು. ಪ್ರಿಯ ಸಹೋದರನ ಸಾವು ಮಾತೆಯನ್ನು ಇನ್ನೂ ದುಃಖ ಕ್ಕೀಡುಮಾಡಿತು.

ಅಭಯನ ಪತ್ನಿ ಸುರಬಾಲೆ ಒಂದು ಹೆಣ್ಣು ಮಗುವಿಗೆ ಜನ್ಮ ವನ್ನಿತ್ತಳು. ಆ ಮಗುವಿಗೆ ರಾಧಾರಾಣಿಯೆಂದು ಹೆಸರಿಟ್ಟರು. ಚಿಕ್ಕದಿರುವಾಗಲೇ ತಂದೆತಾಯಿಯನ್ನು ಕಳೆದುಕೊಂಡ ಸುರ ಬಾಲೆ ತನ್ನ ಪತಿಯನ್ನೂ ಕಳೆದುಕೊಂಡಳು. ಕೊನೆಗೆ ತವರುಮನೆ ಯಲ್ಲಿ ಅವಳನ್ನು ನೋಡಿಕೊಳ್ಳುತ್ತಿದ್ದ ಆಪ್ತರೂ ತೀರಿಕೊಂಡು, ಜೀವನದಲ್ಲಿ ಒಂದಾದ ಮೇಲೊಂದು ಏಟುಗಳನ್ನು ತಿಂದು, ಕೊನೆಗೆ ಹುಚ್ಚಿಯೇ ಆದಳು. ತನ್ನ ಮಗುವನ್ನು ನೋಡಿಕೊಳ್ಳಲೂ ಅವಳಿಗೆ ಅಸಾಧ್ಯವಾಯಿತು. ಒಂದು ದಿನ ಶ್ರೀಮಾತೆಯವರು ತವರುಮನೆಯ ಕೈಸಾಲೆಯಲ್ಲಿ ಕುಳಿತಿದ್ದರು. ಅವರು ತಮ್ಮ ನಿಜಸ್ವರೂಪದಲ್ಲೇ ವಿಹರಿಸುತ್ತಿದ್ದರು. ಹಠಾತ್ತಾಗಿ ಹುಚ್ಚಿ ಸುರ ಬಾಲಾ ಮನೆಯ ಒಳಗಿಂದ ಹೊರಬಂದಳು. ಕಂಕುಳಲ್ಲಿ ಕೆಲವು ಬಟ್ಟೆಗಳ ಕಂತೆ. ಅವುಗಳಲ್ಲಿ ಕೆಲವು ನೆಲದಲ್ಲಿ ತೂರಾಡುತ್ತಿವೆ. ಅವುಗಳನ್ನು ಮತ್ತೆ ಮತ್ತೆ ಎತ್ತಿಕೊಳ್ಳುತ್ತಿರುವಳು. ಕೆದರಿದ ಕೂದಲು. ಕಣ್ಣುಗಳು ಕೆಂಪಾಗಿ ಅದೆಲ್ಲೋ ದೃಷ್ಟಿ. ಬಾಯಲ್ಲಿ ಏನೇನೋ ಒದರುತ್ತಿದ್ದಾಳೆ. ತಾಯಿಯನ್ನು ಕಂಡ ಮಗು ರಾಧು ಅಂಬೆಗಾಲಿಡುತ್ತಾ ಅವಳನ್ನು ಹಿಂಬಾಲಿಸಿದೆ. ಆದರೆ ಸುರಬಾಲೆಗೆ ತನ್ನ ಮಗುವಿನ ಮೇಲೆ ಗಮನವೇ ಇಲ್ಲ. ಕೈಯಿಂದ ಬೀಳುತ್ತಿರುವ ಬಟ್ಟೆಗಳನ್ನು ಪುನ: ಕಂಕುಳಲ್ಲಿ ಸೇರಿಸಿ, ಹೊರಬಾಗಿಲಿನಿಂದ ಹೊರಗೆ ಹೊರಟುಹೋದಳು. ತಾಯಿಯು ಹೋದ ಕಡೆ ನೋಡುತ್ತಾ ಮಗು ರಾಧು ಅಳಲು ಶುರುಮಾಡಿತು. ತನ್ನ ಅಲೌಕಿಕ ಸಾಮ್ರಾಜ್ಯದಲ್ಲೇ ವಿಹರಿಸುತ್ತಿದ್ದ ಶ್ರೀಮಾತೆಯವರ ಮನಸ್ಸು ಈ ಕರುಣಾಜನಕವಾದ ದೃಶ್ಯದಿಂದ ತುಡಿಯಿತು. 'ಓ ! ಈ ಮಗುವಿಗೆ ತಂದೆ ಇಲ್ಲ , ತಾಯಿ ಹುಚ್ಚಿ. ಇವಳನ್ನು ಯಾರು ನೋಡಿಕೊಳ್ಳುವರು?' ಎಂದು ಅವರ ಹೃದಯ ವಾತ್ಸಲ್ಯದಿಂದ ತುಂಬಿ, ಕುಳಿತಲ್ಲಿಂದ ಮೆಲ್ಲನೆ ಎದ್ದು ಬಂದು, ರಾಧುವನ್ನು ಕೈಗಳಿಂದ ಎತ್ತಿಕೊಂಡರು. ಕೂಡಲೇ ಶ್ರೀರಾಮಕೃಷ್ಣರು ಪ್ರತ್ಯಕ್ಷ ರಾಗಿ, ''ನಾನು ಹಿಂದೆ ತೋರಿಸಿದ್ದ ಬಾಲಕಿ ಇವಳೇ. ಇವಳು ಯೋಗಮಾಯೆ. ಇವಳನ್ನು ಆಶ್ರಯಿಸಿ ಈ ಜಗತ್ತಿನಲ್ಲಿ ನನ್ನ ಅವತಾರ ಉದ್ದೇಶವನ್ನು ಮುಂದುವರಿಸು'' ಎಂದು ಹೇಳಿ ಅದೃಶ್ಯರಾದರು. ಈ ಅನಿತ್ಯ ಸಂಸಾರದಲ್ಲಿರಲು ಇಷ್ಟವಿಲ್ಲದ ಮಾತೆಯ ಮನಸ್ಸನ್ನು ಶ್ರೀರಾಮಕೃಷ್ಣರು ಜಗತ್ತಿಗೆ ಇಳಿಸಿದರು. ಹೆತ್ತತಾಯಿಯಿಂದ ಯಾವ ಸಾಂತ್ವನವೂ ಸಿಗದ ರಾಧು ಶ್ರೀಮಾತೆಯ ತೋಳಿನಲ್ಲಿ ಸಮಾಧಾನ ಹೊಂದಿದಳು. ಅವಳನ್ನು ತಡವುತ್ತಾ ಶ್ರೀಮಾತೆ, 'ಹಾಗಾದರೆ ನಾನು ಇವಳನ್ನು ಅವ ಲಂಬಿಸಿ ಈ ಮಾಯಾ ಜಗತ್ತಿನಲ್ಲಿರಬೇಕೆ?' ಎಂದು ಅಂದು ಕೊಂಡರೂ, ವೈರಾಗ್ಯದಿಂದ ಕೂಡಿದ ಅವರ ಮನಸ್ಸು ಅದಕ್ಕೆ ಸುಲಭವಾಗಿ ಒಪ್ಪುತ್ತಿಲ್ಲ. ಆದರೆ ರಾಧು ಆರ್ತದೃಷ್ಟಿಯಿಂದ ಅವರ ಮುಖವನ್ನೇ ನೋಡುತ್ತಿದ್ದಾಳೆ. ಶ್ರೀಮಾತೆ ಅವಳನ್ನು ಸಂತೈಸುತ್ತಾ ಎದೆಗೆ ತಬ್ಬಿದರು. ಹೀಗೆ ಮಾಯೆಯ ಒಳಗೆ ಮಹಾಮಾಯೆ ಪ್ರವೇಶಿಸಿದಳು.

ಅಂದಿನಿಂದ ಶ್ರೀಮಾತೆಯವರು ರಾಧುವಿನ ಪಾಲನೆಯಲ್ಲಿ ತೊಡಗಿದರು. ಅವಳು ಹಸಿದರೆ ಉಣಿಸುವರು, ಅತ್ತರೆ ಸಮಾ ಧಾನಿಸುವರು, ನಕ್ಕರೆ ಆನಂದಿಸುವರು. ಸಾಕ್ಷಾತ್ ಜಗಜ್ಜನನಿಯ ಮಾತೃವಾತ್ಸಲ್ಯವು ರಾಧುವಿನಲ್ಲಿ ಕೇಂದ್ರೀಕರಿಸಿತು. ಆದರೆ ಯಾರು ಈ ರಾಧು? ಅವಳೇ ಈ ಜಗತ್ತಿನ ಜೀವಿಗಳ ಪ್ರತಿನಿಧಿ. ಹಿಂದೆ ಭಗೀರಥನ ತಪಸ್ಸಿನಿಂದ ಸಂತುಷ್ಟಳಾದ ಗಂಗೆಯು ರಭಸ ದಲ್ಲಿ ಸ್ವರ್ಗದಿಂದ ಭೂಮಿಗೆ ಧುಮುಕಿದಾಗ, ಆ ರಭಸವನ್ನು ಭೂಮಿಯು ತಡೆಯಲು ಅಸಾಧ್ಯವಾಗಿದ್ದುದರಿಂದ ಶಿವನು ತನ್ನ ಜಟೆಯಲ್ಲಿ ಬಂಧಿಸಿದನು. ಅಲ್ಲಿಂದ ಗಂಗೆಯು ಶಾಂತವಾಗಿ, ಕೋಮಲವಾಗಿ, ನಾನಾ ಕವಲುಗಳಾಗಿ ಹರಿಯತೊಡಗಿದಳು. ಸಹಸ್ರ ಸಹಸ್ರ ಜನರು ಈ ಮಹಾನದಿಯಲ್ಲಿ ಸ್ನಾನ ಮಾಡಿ ಮುಕ್ತ ರಾಗತೊಡಗಿದರು. ಅಂತೆಯೇ ಮಹಾಶಕ್ತಿಯ ಕೃಪಾವಾತ್ಸಲ್ಯ ನೇರವಾಗಿ ಈ ಪ್ರಪಂಚಕ್ಕೆ ಹರಿದರೆ, ಪ್ರಪಂಚದ ನಿತ್ಯಲೀಲೆಗೆ ಬಾಧಕವಾಗುವ ಸಂಭವವಿಲ್ಲವೆ! ಸದಾ ಅನಂತತೆಯಲ್ಲಿ ನೆಲೆ ಸಿರುವ ಶ್ರೀಮಾತೆಯ ಮನಸ್ಸನ್ನು ರಾಧುವಿನಲ್ಲಿ ಬಂಧಿಸುವುದೂ ಅವಶ್ಯವಾಗಿತ್ತು. ಅಂತೂ ಶ್ರೀರಾಮಕೃಷ್ಣರು ಮಹಾಶಕ್ತಿಯನ್ನು ಯೋಗಮಾಯೆಯಲ್ಲಿ ಕೇಂದ್ರೀಕರಿಸಿ, ಅಲ್ಲಿಂದ ಆ ಶಕ್ತಿಯು ಕೋಮಲವಾಗಿ ಹರಿಯುವಂತೆ ಮಾಡಿದರು.

ರಾಧುವಿನಲ್ಲಿ ತಾದಾತ್ಮ್ಯ ಹೊಂದಿದ್ದ ಮಾತೆಯ ದಿನಚರಿ ಯನ್ನು ನೋಡಿ ಸಾಧಾರಣ ಜನರಿಗೆ ಮಾತ್ರವಲ್ಲದೆ, ಭಕ್ತರಿಗೂ ಶಿಷ್ಯರಿಗೂ ಆಶ್ಚರ್ಯವುಂಟಾಗುತ್ತಿತ್ತು. ಕಲ್ಕತ್ತಾ, ಜಯರಾಂಬಾಟಿ, ತೀರ್ಥಸ್ಥಳಗಳು – ಹೀಗೆ ಅವರು ಎಲ್ಲಿಗೆ ಹೋದರೂ ರಾಧು ಜೊತೆಯಲ್ಲಿರಲೇಬೇಕು. ಶಿಷ್ಯರೊಂದಿಗೆ ಪ್ರಯಾಣ ಮಾಡುವಾಗ ಲೆಲ್ಲಾ ರಾಧುವಿಗೆ ಶ್ರೀಮಾತೆ ಕುಳಿತಿರುವ ಎತ್ತಿನ ಗಾಡಿಯಲ್ಲೇ ಸ್ಥಾನ ಸಿಗುತ್ತಿತ್ತು. ಭಕ್ತರು ಸಾಮಾನುಗಳನ್ನು ಕೊಟ್ಟರೆ ಅವುಗಳು ಮೊದಲು ರಾಧುವಿಗೆ ಮೀಸಲಾಗಿರುತ್ತಿತ್ತು. ಶಿಷ್ಯರಿಗೆ ಪತ್ರಗಳನ್ನು ಬರೆಯುವಾಗಲೆಲ್ಲಾ ಶ್ರೀಮಾತೆ ರಾಧುವಿನ ಸಮಾಚಾರವನ್ನು ಮುಖ್ಯವಾಗಿ ತಿಳಿಸುವರು. ಜಗತ್ತಿನಿಂದ ಸದಾ ನಿರ್ಲಿಪ್ತವಾಗಿ, ಸ್ವಸ್ವರೂಪದಲ್ಲೇ ನೆಲೆಸಿರುತ್ತಿದ್ದ ಅವರ ಮನಸ್ಸನ್ನು ಜೀವಿಗಳ ಉದ್ಧಾರಕ್ಕಾಗಿ ಇಳಿಸಲು ಹೀಗೆ ಯೋಗಮಾಯೆಯ ಸಹಾಯ ಪ್ರತಿಕ್ಷಣವೂ ಅವಶ್ಯವಾಗಿತ್ತು. ಆದುದರಿಂದಲೇ ಅವರ ದಿನಚರಿ ಯಲ್ಲಿ ರಾಧುವಿಗೆ ಇಂತಹ ಮುಖ್ಯ ಸ್ಥಾನ. ಶ್ರೀರಾಮಕೃಷ್ಣರು ಭಕ್ತರೊಂದಿಗೆ ಮಾತನಾಡುತ್ತಿದ್ದಂತೆ ಸಮಾಧಿಗೆ ಹೋಗುವುದು, ಮತ್ತೆ ಇಳಿದುಬರುವುದು ಸ್ಪಷ್ಟವಾಗಿ ತಿಳಿಯುತ್ತಿತ್ತು. ಆದರೆ ಅವ ರಂತೆಯೇ ಇದ್ದ ಶ್ರೀಮಾತೆಯವರ ಉನ್ನತಸ್ತರವನ್ನು ಅರ್ಥ

ಮಾಡಿಕೊಳ್ಳುವುದು ಅಸಾಧ್ಯವಾಗಿತ್ತು. ಆದುದರಿಂದ ಅನೇಕರು ಅವರ ದಿವ್ಯತೆಯ ವಿಷಯವಾಗಿ ಸಂಶಯಪಟ್ಟಿದ್ದಾರೆ. ಶ್ರೀರಾಮ ಕೃಷ್ಣರ ಜೀವನವನ್ನು ಹೋಲಿಸಿ ಕೆಲವರಂತೂ ಶ್ರೀಮಾತೆಗೆ ನೇರ ವಾಗಿ ಪ್ರಶ್ನೆಯನ್ನು ಕೇಳಿದ್ದಾರೆ: ''ಅಮ್ಮಾ, ನಿಮಗೇಕೆ ರಾಧುವಿನ ಮೇಲೆ ಇಷ್ಟೊಂದು ಮೋಹ? ಅವಳಿಲ್ಲದೆ ನಿಮ್ಮಿಂದ ಏನೂ ನಡೆಯುತ್ತಿಲ್ಲ..'' ಇತ್ಯಾದಿ. ಶ್ರೀಮಾತೆಯವರು ಏನು ಉತ್ತರ ನೀಡುವರು? ಅಜ್ಞಾನಿಗಳನ್ನು ಅವರು ಹೇಗೆ ಸಮಾಧಾನ ಪಡಿಸು ವರು? ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ , '**ಅವಜಾನಂತಿ ಮಾ ಮೂಢಾ ಮಾನುಷೀಂ ತನುಮಾಶ್ರಿತಂ। ಪರಂಭಾವ ಮಜಾನಂತೋ ಮಮ ಭೂತಮಹೇಶ್ವರಂ ॥**' (ಸರ್ವಭೂತ ಗಳಿಗೂ ಮಹೇಶ್ವರನಾದ ನನ್ನ ಪರಮ ಭಾವವನ್ನು ಅರಿಯದ ಮೂಢರು ಮನುಷ್ಯ ದೇಹವನ್ನು ಆಶ್ರಯಿಸುವ ನನ್ನನ್ನು ತಿರಸ್ಕರಿ ಸುತ್ತಾರೆ.) *(ಗೀತಾ, ೯.೧೧)* ಎಂದು ಹೇಳಿದಂತೆ ಶ್ರೀಮಾತೆಯೂ ಅಂದುಕೊಳ್ಳುತ್ತಾರೆ.

ತನಗೆ ಇಂತಹ ಪ್ರಾಮುಖ್ಯತೆ ಸಿಕ್ಕಿದ ರಾಧುವಂತೂ ತುಂಬಾ ವಿಚಿತ್ರ ಸ್ವಭಾವದವಳಾಗಿದ್ದಳು. ಅವಳಿಗೆ ಯಾವ ಅಹಂಕಾರವೂ ಇರಲಿಲ್ಲ. ಶ್ರೀಮಾತೆಯವರೇ ಅವಳ ಸರ್ವಸ್ವ. ಅವಳು ತನ್ನ ಹೆತ್ತತಾಯಿಯನ್ನೂ ದೂರವಿಟ್ಟಿದ್ದಳು. ವಿವಾಹವಾದ ನಂತರ ಪತಿಯ ಮನೆಯನ್ನು ಬಿಟ್ಟು ಶ್ರೀಮಾತೆಯ ಜೊತೆಯಲ್ಲೇ ಇದ್ದಳು. ಶ್ರೀಮಾತೆಯ ದಿವ್ಯತೆಯ ಬಗ್ಗೆ ಅವಳಿಗೇನೂ ಅರಿವಿರ ಲಿಲ್ಲ. ಅವರ ಬಳಿಗೆ ಬರುವ ಶಿಷ್ಯರು, ಆಧ್ಯಾತ್ಮಿಕ ಜೀವನ ಇದಾವುದನ್ನೂ ಅವಳು ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಶ್ರೀಮಾತೆ ಯವರ ಸಹೋದರರಿಗೆ, ಅವರ ಪತ್ನಿಯರಿಗೆ, ಮಕ್ಕಳಿಗೆ ಶ್ರೀಮಾತೆಯವರ ಶಿಷ್ಯಂದಿರು ಕೊಡುವ ಧನದ ಮೇಲೆ ಆಕ ರ್ಷಣೆ ಇದ್ದರೆ, ರಾಧುವಿಗೆ ಅದರ ಮೇಲೆ ಗಮನವೇ ಇರಲಿಲ್ಲ. ಶ್ರೀಮಾತೆಯವರು ರಾಮೇಶ್ವರಕ್ಕೆ ತೀರ್ಥಯಾತ್ರೆಗೆ ಹೋದಾಗ ಅಲ್ಲಿಯ ರಾಜನು ನಾನಾ ರತ್ನಗಳಿಂದ ತುಂಬಿದ ತನ್ನ ಖಜಾನೆ ಯಿಂದ ಉಡುಗೊರೆಯಾಗಿ ಏನನ್ನಾದರೂ ಶ್ರೀಮಾತೆ ಸ್ವೀಕರಿ ಸಲು ಕೇಳಿಕೊಳ್ಳುವಂತೆ ದೇವಸ್ಥಾನದ ಪೂಜಾರಿಗಳಿಗೆ ಆದೇಶ ನೀಡಿದನು. ವೈರಾಗ್ಯದಿಂದ ತುಂಬಿದ ಶ್ರೀಮಾತೆ ತಾವು ಏನನ್ನೂ ಸ್ವೀಕರಿಸದೆ, ರಾಧುವಿಗೆ ಬೇಕಾದುದನ್ನು ತೆಗೆದುಕೊಳ್ಳಲು ಹೇಳಿ ದರೆ, ರಾಧು ಖಜಾನೆಯಿಂದ ಏನನ್ನೂ ತೆಗೆದುಕೊಳ್ಳದೆ ಹೊರಗಿನ ಅಂಗಡಿಯಿಂದ ಸ್ಲೇಟ್, ಕಡ್ಡಿಯನ್ನು ಖರೀದಿ ಮಾಡಿಸಿಕೊಂಡಳು. ಇಂತಹ ರಾಧು ಶ್ರೀಮಾತೆಗಂತೂ ನಾನಾ ರೀತಿಯ ತೊಂದರೆ ಗಳನ್ನು ಕೊಟ್ಟು ಗೋಳಾಡಿಸಿದ್ದಳು. ಇದುವೇ ಪ್ರಪಂಚದ ಮಾನವರಿಗೆ ಅವಳು ನೀಡಿದ ಕೊಡುಗೆ. ಇದರಿಂದ ಸಂಸಾರದಲ್ಲಿ ಬಳಲಿ, ಮಾತೆಯವರ ಬಳಿ ಬಂದ ಜನರನ್ನು ಶ್ರೀಮಾತೆಯವರು ಸಮಾಧಾನಪಡಿಸಿ, ಮುಕ್ತಿಯ ಪಥದಲ್ಲಿ ಮುನ್ನಡೆಸಿದರು. ಹೀಗೆ ಯೋಗಮಾಯೆಯೊಂದಿಗೆ ಶ್ರೀಮಾತೆಯವರು ಶ್ರೀರಾಮಕೃಷ್ಣರ ಅವತಾರದ ಉದ್ದೇಶವನ್ನು ಈಡೇರಿಸಿದರು.

ಶ್ರೀಮಾತೆಯವರು ತಮ್ಮ ಲೀಲೆಯನ್ನು ಮುಗಿಸಿ ಸ್ವಧಾಮಕ್ಕೆ ತೆರಳುವ ಸಮಯ ಬಂದಾಗ, ರಾಧುವಿನೊಂದಿಗಿದ್ದ ಬಂಧನ ವನ್ನು ಬಿಡಿಸಿಕೊಂಡ ಘಟನೆ ಇನ್ನೂ ಆಶ್ಚರ್ಯಕರವಾಗಿತ್ತು. ಲೀಲೆಯ ಅಂತ್ಯಭಾಗದಲ್ಲಿ ಶ್ರೀಮಾತೆ ರೋಗದಿಂದ ಮಲಗಿ ದರು. ಸ್ವಾಮಿ ಶಾರದಾನಂದ ಮಹಾರಾಜರು ಅವರ ಶುಶ್ರೂಷೆ ಮಾಡುವ ಸಲುವಾಗಿ ಶ್ರೀಮಾತೆಯವರನ್ನು 'ಉದ್ಬೋಧನ'ಕ್ಕೆ ಕರೆಸಿಕೊಂಡರು. ಜೊತೆಯಲ್ಲಿ ರಾಧು, ಸುರಬಾಲಾ ಮತ್ತು ಉಳಿ ದವರೆಲ್ಲರೂ ಇದ್ದರು. ಒಂದು ದಿನ ಶ್ರೀಮಾತೆ ತಮ್ಮ ಸೇವಕಿ ಯನ್ನು ಕರೆದು, ರಾಧು ಮತ್ತು ಜೊತೆಯಲ್ಲಿರುವವರನ್ನೆಲ್ಲಾ ಜಯರಾಂಬಾಟಿಗೆ ಕಳುಹಿಸಲು ಶಾರದಾನಂದರಿಗೆ ಹೇಳುವಂತೆ ಆದೇಶವನ್ನು ನೀಡಿದರು. ''ರಾಧು ಇಲ್ಲದೆ ಇರಲು ನಿಮ್ಮಿಂದ ಸಾಧ್ಯವೆ ?'' ಎಂದು ಸೇವಕಿ ಕೇಳಿದಾಗ ಶ್ರೀಮಾತೆ, ''ಖಂಡಿತ ಸಾಧ್ಯ''ವೆಂದು ಗಂಭೀರವಾಗಿ ಉತ್ತರವನ್ನು ನೀಡಿದರು. ಶ್ರೀಮಾತೆ ಯವರು ಇನ್ನು ಈ ಜಗತ್ತಿನಲ್ಲಿರಲು ಇಚ್ಛಿಸುತ್ತಿಲ್ಲವೆಂದು ಅರಿತು ಕೊಂಡ ಗೋಲಾಪ್ ಮಾ, ಯೋಗಿನ್ ಮಾ ಮೊದಲಾದವರು, ಮಾತೆಯ ಮನಸ್ಸನ್ನು ರಾಧುವಿನಲ್ಲಿರಿಸಲು ಪ್ರಯತ್ನಿಸಿದರು. ಆದರೆ ಅದು ನಿಷ್ಫಲವಾಗಿ, ರಾಧು ತನ್ನ ಬಳಿ ಬರಬಾರದೆಂದು ಶ್ರೀಮಾತೆಯವರು ಆಜ್ಞೆ ನೀಡಿದರು. ''ನಾನು ಒಮ್ಮೆ ಬಿಟ್ಟಿರು ವುದನ್ನು ಮತ್ತೆ ಸ್ವೀಕರಿಸುವುದಿಲ್ಲ'' ಎಂದು ಖಚಿತವಾಗಿ ನುಡಿ ದರು. ಕೊನೆಗೆ ಒಂದು ದಿನ ರಾಧು ಶ್ರೀಮಾತೆಯ ಬಳಿ ಬಂದಾಗ, ಶ್ರೀಮಾತೆ ಅವಳಿಗೆ, ''ಕಂಬಕ್ಕೆ ಕಟ್ಟಿಕೊಂಡಿದ್ದ ನನ್ನನ್ನು ನಾನು ಈಗ ಬಿಡಿಸಿಕೊಂಡಿದ್ದೇನೆ...ನೀನು ಇನ್ನೇನು ಮಾಡಬಲ್ಲೆ ನನಗೆ? ...ನಾನೇನು ಕೇವಲ ಮನುಷ್ಯಳೆಂದುಕೊಂಡಿದ್ದೀಯಾ? ನೀನು ಇಲ್ಲಿಂದ ಹೊರಟುಹೋಗು'' ಎಂದರು. ಅವರ ಮಾತು ರಾಧು ವಿಗೆ ಎಷ್ಟು ಅರ್ಥವಾಯಿತೋ! ಅಂತೂ ಅಷ್ಟು ದಿನ ಶ್ರೀಮಾತೆ ಯವರಿಗೆ ಸದಾ ಕಿರುಕುಳವನ್ನು ಕೊಟ್ಟು ಅವರ ಲೀಲೆಗೆ ಸಹಕರಿ ಸಿದ ರಾಧು ತಣ್ಣಗಾದಳು; ತನ್ನ ಕರ್ತವ್ಯ ಮುಗಿಯಿತೋ ಎಂಬಂತೆ. ಆಕೆ ದೂರದಿಂದಲೇ ಅವರನ್ನು ನೋಡತೊಡಗಿದಳು.

ಶ್ರೀಮಾತೆಯವರ ಲೀಲಾವಸಾನವಾಯಿತು. ರಾಧುವಿನ ಮುಂದಿನ ಜೀವನ ಸಾಧಾರಣವಾಗಿ ನಡೆಯಿತು. ಆದರೆ ಅವಳ ವಾರ್ಧಕ್ಯದಲ್ಲಿ ರಾಮಕೃಷ್ಣ ಸಂಘದ ಹಿರಿಯ ಸಂನ್ಯಾಸಿಗಳು ಅವಳನ್ನು ಕಾಶಿಗೆ ಕಳುಹಿಸುವ ಏರ್ಪಾಡು ಮಾಡಿದಾಗ ಅವಳು , ''ಕಾಶಿಯಲ್ಲಿ ಮರಣ ಹೊಂದಿದರೆ ನಿರ್ವಾಣ ಪ್ರಾಪ್ತಿಯಾಗು ವುದು. ನನಗೇಕೆ ನಿರ್ವಾಣ? ನನ್ನ ಸ್ಥಾನ ಶ್ರೀಮಾತೆಯಲ್ಲಿ.. ನಾನು ಜಯರಾಂಬಾಟಿಗೆ ಹೋಗುತ್ತೇನೆ'' ಎಂದು ಹೇಳಿ ಜಯ ರಾಂಬಾಟಿಗೆ ಹೊರಟು ಹೋದಳು. ಅಂದರೆ, ಮಾನವ ಶರೀರ ವನ್ನು ತ್ಯಜಿಸಿ, ದೈವೀಸ್ವರೂಪದಲ್ಲಿಯೂ ತನ್ನ ಲೀಲೆಯನ್ನು ಮುಂದುವರಿಸಿದ ಶ್ರೀಮಾತೆಯಲ್ಲಿ ಅವರ ಯೋಗಮಾಯೆ ಕೂಡ ಒಂದಾಗಿರುವಳು ಎಂದೇ ನಾವು ಅರಿತುಕೊಳ್ಳಬೇಕಾ ಗುವುದು.



# ಒರಟ ಸಂನ್ಯಾಸಿ ಹಾಗೂ ಶ್ರೀಮಾತೆ

ಮೂಲ : **ಸ್ವಾಮಿ ಶಾಂತಾನಂದ ಪುರಿ** ಅನುವಾದ: **ಕೆ.ಆರ್. ಮೋಹನ್**

*(ಸ್ವಾಮಿ ಶಾಂತಾನಂದಪುರಿ (೧೯೨೮–೨೦೧೪)ಯವರು 'fragrant flowers' ಎಂಬ ತಮ್ಮ ಕೃತಿಯಲ್ಲಿ ದಾಖಲಿಸಿದ ಅನುಭವದ ಭಾವಾನುವಾದವಿದು. ಅವರು ಶ್ರೀರಾಮಕೃಷ್ಣರ ಮಾನಸಪುತ್ರ ಸ್ವಾಮಿ ಬ್ರಹ್ಮಾನಂದರ ಶಿಷ್ಯರಾದ ಸ್ವಾಮಿ ಪುರುಷೋತ್ತಮಾನಂದ ಪುರಿಯವರಿಂದ ಮಂತ್ರದೀಕ್ಷೆ ಪಡೆದರು. ಭಾರತ ಸರಕಾರದಲ್ಲಿ ಉನ್ನತ ಹುದ್ದೆಯಲ್ಲಿದ್ದು, ನಿವೃತ್ತಿ ನಂತರ ೧೯೯೨ ರಲ್ಲಿ ಸಂನ್ಯಾಸ ಪಡೆದರು. ತಮ್ಮ ಗುರುಗಳ ಆದೇಶದ ಮೇಲೆ ೭ ವರ್ಷ ಪರಿವ್ರಾಜಕರಾಗಿ ಭಾರತದಾದ್ಯಂತ ಸಂಚಾರ ಮಾಡಿದರು. ಆ ಸಂದರ್ಭದಲ್ಲಿ ಅವರು ಜಯರಾಂಬಾಟಿಗೆ ಭೇಟಿಕೊಟ್ಟಿದ್ದರು. ಈ ಲೇಖನದ ಅನುವಾದಕರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.)*



**ಜು**ಲೈ ೧೯೯೨ರಲ್ಲಿ ನನಗೆ ಬೇಲೂರು ಮಠದಿಂದ ಕಾಮಾರಪುಕುರ ಹಾಗೂ ಜಯರಾಂಬಾಟಿಯ ಆಶ್ರಮಗಳಿಗೆ ಹೋಗಲು ಪರಿಚಯ ಪತ್ರ ದೊರಕಿತ್ತು. ಠಾಕೂರರ ಮೇಲೆ ನನಗಿದ್ದ ಭಕ್ತಿ, ಶ್ರದ್ಧೆ ಹಾಗೂ ವಿಶ್ವಾಸ ಶ್ರೀಮಾತೆಯವರ ತನಕ ವಿಸ್ತಾರವಾಗಿರಲಿಲ್ಲ. ನಾನು ಶ್ರೀಮಾತೆಯವರ ಬಗ್ಗೆ ಬರೆದಿದ್ದ ಎಲ್ಲಾ ಕೃತಿಗಳನ್ನು ಓದಿಕೊಂಡಿದ್ದೆ. ಠಾಕೂರರು, ಸ್ವಾಮೀಜಿ ಮತ್ತು ಇತರ ನೇರ ಶಿಷ್ಯರಿಗೆ ಶ್ರೀಮಾತೆಯವರ ಬಗ್ಗೆ ಇರುವ ಪೂಜ್ಯಭಾವನೆ ಕೂಡ ನನಗೆ ತಿಳಿದಿತ್ತು. ವಾಸ್ತವಕ್ಕಿಂತ ಜಾಸ್ತಿಯಾಗಿ ಮಹಾಪುರುಷರ ಧರ್ಮಪತ್ನಿಗಳ ಬಗ್ಗೆ ಗುಣಗಾನ ಮತ್ತು ಉತ್ಪ್ರೇಕ್ಷೆ ಮಾಡುತ್ತಾರೆ ಎಂದು ನನ್ನ ಭಾವನೆ. ಹಾಗಾಗಿ ನನಗೆ ಜಯರಾಂಬಾಟಿಗೆ ಹೋಗಲು ಅಂತಹ ಉತ್ಸಾಹವಿರಲಿಲ್ಲ.

ಕಾಮಾರಪುಕುರ ಆಶ್ರಮದಲ್ಲಿ ನನ್ನ ವಾಸ್ತವ್ಯದ ಮೂರನೇ ದಿನ ಠಾಕೂರರ ವಿಗ್ರಹದ ಮುಂದೆ ಕುಳಿತು ಧ್ಯಾನ ಮಾಡುತ್ತಿದ್ದೆ. ಆ ದಿನ ಅವರನ್ನು ಕಾವಿ ಬಟ್ಟೆಯಿಂದ ಅಲಂಕರಿಸಿದ್ದರು. ಧ್ಯಾನದ ಮಧ್ಯೆ ಒಮ್ಮೆ ಕಣ್ಣು ತೆರೆದಾಗ, ಠಾಕೂರರು ಇದ್ದ ಜಾಗದಲ್ಲಿ ಶ್ರೀಮಾತೆಯವರು ತಲೆಯ ಮೇಲೆ ಸೆರಗನ್ನು ಹಾಕಿಕೊಂಡಿದ್ದರು. ನೀಳವಾದ ಕೇಶರಾಶಿಯನ್ನು ಭುಜದ ಮೇಲೆ ಇಳಿಬಿಟ್ಟಿದ್ದರು. ಕೆಲವು ನಿಮಿಷ ನಾನು ತದೇಕಚಿತ್ತದಿಂದ ಅವರನ್ನು ನೋಡುತ್ತಿದ್ದೆ. ಯಾವ ಬದಲಾವಣೆಯೂ ಕಾಣಿಸಲಿಲ್ಲ. ನಿಜವಾಗಿಯೂ ನಾನು ಎಚ್ಚರದಲ್ಲಿದ್ದೆನೆಂದು ಖಾತ್ರಿ ಮಾಡಲು ನನ್ನ ಮೈಯನ್ನು ಚಿವುಟಿಕೊಂಡೆ. ಅನಂತರ ನಾನು ಧ್ಯಾನಕ್ಕೆ ಹೋದೆ. ಕುತೂಹಲದಿಂದ ಆಗಾಗ ಕಣ್ಣು ತೆರೆದು ನೋಡುತ್ತಿದ್ದೆ. ಆಗಲೂ ಕೂಡ ಠಾಕೂರರ ಸ್ಥಾನದಲ್ಲಿ ಶ್ರೀಮಾತೆಯವರು ಕಾಣಿಸುತ್ತಿದ್ದರು. ಕೊನೆಗೆ ನಾನು ಧ್ಯಾನದಿಂದ ಎದ್ದಾಗ, ಕಾವಿ ಧರಿಸಿದ ಠಾಕೂರರು ಕಾಣಿಸಿದರು. ಈ ವಿಚಿತ್ರ ದರ್ಶನದ ಹಿಂದೆ ಇರುವ ಮಹತ್ವ ತಿಳಿಯದೆ, ನನಗೆ ಗೊಂದಲವಾಯಿತು. ಬಹುಶಃ ಶ್ರೀಮಾತೆ ತಮಗಿಂತ ಬೇರೆಯಲ್ಲ, ಮತ್ತು ತಮ್ಮಿಬ್ಬರಲ್ಲಿ ಭೇದವಿಲ್ಲ ಎಂದು ಠಾಕೂರರು ನನಗೆ ಮನವರಿಕೆ ಮಾಡಿಕೊಟ್ಟಿರಬೇಕು. ಮರುದಿನ ಜಯರಾಂಬಾಟಿಗೆ ಹೋಗಲು ತಯಾರಾದೆ.

ಜಯರಾಂಬಾಟಿ ಆಶ್ರಮದಲ್ಲಿ ನನಗೆ ಒಳ್ಳೆಯ ಕೋಣೆ ಕೊಟ್ಟರು. ನಾನಿದ್ದಾಗ ಯಾವ ಅಭ್ಯಾಗತರೂ ಬರಲಿಲ್ಲ. ಹಾಗಾಗಿ ಯಾರಿಗೂ ಹೆಚ್ಚು ಕೆಲಸವಿರಲಿಲ್ಲ. ವಾಸ್ತವ್ಯದ ಕೊನೆಯ ದಿನ, ನಾನು 'ಮಾತೃ ಮಂದಿರ'ದಲ್ಲಿ ಶ್ರೀಮಾತೆಯವರ ಎದುರು ಕುಳಿತು ಆಶ್ರಮದ ಸಂನ್ಯಾಸಿಗಳ ಜತೆ ಧ್ಯಾನಮಾಡುತ್ತಿದ್ದೆ. ಆಗ ಬೆಳಿಗ್ಗೆ ೫.೩೦ ಘಂಟೆಯಾಗಿತ್ತು. ಇದ್ದಕ್ಕಿದ್ದ ಹಾಗೆ ನಾನು ಶ್ರೀಮಾತೆಯವರಿಗೆ, ''ಅಮ್ಮ, ನೀವು ನಿಜವಾಗಿಯೂ ಶಕ್ತಿಶಾಲಿ ಜಗನ್ಮಾತೆಯಾಗಿದ್ದರೆ ನನಗೆ ಮನವರಿಕೆ ಮಾಡಿ ತೋರಿಸಿ. ನಾನು ದುರಹಂಕಾರಿ ಅಲ್ಲ, ಆದರೆ ಅಜ್ಞಾನಿ ಎಂದು ನಿಮಗೆ ಗೊತ್ತು. ದಯಮಾಡಿ ನಿಮ್ಮ ಮಹತ್ವದ ಬಗ್ಗೆ ನಂಬಿಕೆ ಬರುವ ಹಾಗೆ ಕೃಪೆ ಮಾಡಿ. ಈವತ್ತು ಯಾರಾದರೂ ನನಗೆ ಪ್ರಣಾಮಿ (ಸಂನ್ಯಾಸಿಗಳಿಗೆ ಮಾಡುವ ದಾನ) ಕೊಟ್ಟರೆ ಅದು ಕೇವಲ ೧ ಅಥವಾ ೨ ರೂಪಾಯಿ ಆದರೂ ಪರವಾಗಿಲ್ಲ, ಅದನ್ನು ರುಜುವಾತಾಗಿ ಭಾವಿಸುತ್ತೇನೆ'' ಎಂದು ಕಳಕಳಿಯಿಂದ ಪ್ರಾರ್ಥನೆ ಮಾಡಿದೆ.

ಮಂದಿರದಿಂದ ಹೊರಬರುವಾಗ, ಮೆಟ್ಟಲಿನ ಹತ್ತಿರ ಒಬ್ಬ ಬ್ರಹ್ಮಚಾರಿ ನನ್ನ ಹತ್ತಿರ ಬಂದು, ''ಸ್ವಾಮೀಜಿ, ನನ್ನ ವೃದ್ಧ ತಾಯಿಯನ್ನು ಯಾತ್ರಾರ್ಥಿಯಾಗಿ ಕರೆದುಕೊಂಡು ಬಂದಿದ್ದೇನೆ. ನಿನ್ನೆ ನೀವು ಜಪ ಮಾಡುವುದನ್ನು ಅವರು ನೋಡಿದ್ದಾರೆ. ನಿಮಗೆ ನಮಸ್ಕಾರ ಮಾಡಬೇಕೆಂದು ಇಷ್ಟಪಟ್ಟಿದ್ದಾರೆ. ನೀವು ದಯಮಾಡಿ ಕೆಲವು ನಿಮಿಷ ಇಲ್ಲೇ ಇದ್ದರೆ ನಮ್ಮ ತಾಯಿಯನ್ನು ಕೋಣೆಯಿಂದ ಕರೆತರುತ್ತೇನೆ'' ಎಂದು ಹೇಳಿದ. ''ನಾನು ಹೊಸದಾಗಿ ಸಂನ್ಯಾಸ ಸ್ವೀಕಾರ ಮಾಡಿದ್ದೇನೆ. ನನಗಿಂತ ಹಿರಿಯಸಂನ್ಯಾಸಿಗಳು ಆಶ್ರಮದಲ್ಲಿ ಇದ್ದಾರೆ. ಅವರ

ಹತ್ತಿರ ನಿನ್ನ ತಾಯಿಯನ್ನು ಕರೆದುಕೊಂಡು ಹೋಗು'' ಎಂದು ಸಮಜಾಯಿಸಿ ಹೇಳಿದೆ. ಆದರೆ ಬ್ರಹ್ಮಚಾರಿ ಇದಕ್ಕೆ ಒಪ್ಪದೆ ಪದೇ ಪದೇ ವಿನಂತಿ ಮಾಡಿದಾಗ, ನಾನು ವಿಧಿಯಿಲ್ಲದೆ ಒಪ್ಪಿಕೊಂಡೆ. ಕೊನೆಗೆ ಆತ ತನ್ನ ತಾಯಿಯನ್ನು ಕರೆದುಕೊಂಡು ಬಂದ. ಆಕೆ ನನಗೆ ನಮಸ್ಕಾರ ಮಾಡಿ ೧೧ ರೂ. ಪ್ರಣಾಮಿ ಕೊಟ್ಟಳು. ಶ್ರೀಮಾತೆ ನನ್ನ ಪ್ರಾರ್ಥನೆಯನ್ನು ಮನ್ನಿಸಿ ರುಜುವಾತನ್ನು ಮಾಡಿ ತೋರಿಸಿದರು. ಆದರೆ ನಾನು ಮೂರ್ಖತನದಿಂದ, 'ಅಮ್ಮ, ನಾನು ಈ ರುಜುವಾತನ್ನು ಒಪ್ಪಿಕೊಳ್ಳಲಾರೆ. ಯಾಕೆಂದರೆ ಆ ವೃದ್ಧೆ ನನಗೆ ಪ್ರಣಾಮಿ ಕೊಡಲು ನಿನ್ನೆಯೇ ನಿಶ್ಚಯ ಮಾಡಿದ್ದಳು. ಆದರೆ ನಾನು ಈ ಬೆಳಿಗ್ಗೆ ನಿಮ್ಮ ಹತ್ತಿರ ರುಜುವಾತು ತೋರಿಸಲು ಪ್ರಾರ್ಥನೆ ಮಾಡಿದ್ದೆ' ಎಂದು ಹೇಳಿ, ಅನಂತರ, 'ಅಮ್ಮ, ನನ್ನ ವಾಸ್ತವ್ಯದ ಕೊನೆಯ ದಿನ ಇಂದು. ಒಂದು ವೇಳೆ ಎಂಟು ಅಥವಾ ಹತ್ತು ಅಭ್ಯಾಗತರು ಬಂದು ನನಗೆ ದಕ್ಷಿಣೆ ಕೊಟ್ಟರೆ ನಾನು ನಿನ್ನ ಮಹತ್ವವನ್ನು ಖಂಡಿತಾ ಒಪ್ಪಿಕೊಳ್ಳುತ್ತೇನೆ' ಎಂದು ಮತ್ತೆ ಪ್ರಾರ್ಥನೆ ಮಾಡಿದೆ. ಮೂರ್ಖ ಹಾಗೂ ಅಜ್ಞಾನಿ ಮಕ್ಕಳ ಬಗ್ಗೆ ಮಾತೆಯವರು ಜಾಸ್ತಿ ಅನುಕಂಪ ತೋರಿಸುತ್ತಾರೆ. ಅಲ್ಲವೆ?

ಆ ದಿನ ಮಧ್ಯಾಹ್ನ ಊಟ ಮಾಡಿ ಹೊರಗಿದ್ದ ನಲ್ಲಿಯಲ್ಲಿ ಕೈ ತೊಳೆಯುತ್ತಿದ್ದೆ. ಆಗ ಒಬ್ಬ ಬ್ರಹ್ಮಚಾರಿ ಓಡಿ ಬಂದು, ''ಸ್ವಾಮೀಜಿ ನಿಮ್ಮ ಕೋಣೆಗೆ ಈಗ ವಾಪಸು ಹೋಗಬೇಡಿ. ಅಲ್ಲಿರುವ ಬೆಂಚಿನ ಮೇಲೆ ನೀವು ಕುಳಿತುಕೊಂಡಿರಬೇಕು ಎಂದು ಹಿರಿಯ ಸ್ವಾಮಿಗಳು ಇಷ್ಟಪಡುತ್ತಾರೆ'' ಎಂದು ತಿಳಿಸಿದ. ಒಂದು ಭಾವಣಿ ಕೆಳಗೆ ಸಾಲಾಗಿ ಮೂರು ಸಣ್ಣ ಬೆಂಚುಗಳನ್ನು ಜೋಡಿಸಿದ್ದರು. ನಾನು ಕುಳಿತ ಸ್ವಲ್ಪ ಹೊತ್ತಿನ ನಂತರ ಆಶ್ರಮದ ಇತರ ಸ್ವಾಮಿಗಳು ಬಂದು ನನ್ನ ಜತೆ ಸೇರಿ ಕುಳಿತುಕೊಂಡರು. ಈ ರೀತಿ ಕೂಡಲು ಕಾರಣವೇನಿರಬಹುದೆಂದು ನಾನು ಕುತೂಹಲಿಯಾಗಿದ್ದೆ. ಆಗ ನನ್ನ ಪಕ್ಕದಲ್ಲಿದ್ದ ಸ್ವಾಮಿಗಳು ಹೇಳಿದರು, ''ಇಚ್ಛಾಪುರದಲ್ಲಿರುವ ರಕ್ಷಣಾ ಕಾರಖಾನೆಯ ಅಧಿಕಾರಿಗಳು ಮತ್ತು ಅವರು ಕುಟುಂಬದವರು ಒಂದು ಭಂಡಾರ (ಔತಣ) ನಡೆಸಿದ್ದಾರೆ. ನಮಗೆ ಕಾಣಿಕೆ ಕೊಡಲು ಅವರು ಬರುತ್ತಿದ್ದಾರೆ, ನೋಡಿ.'' ಸುಮಾರು ಇಪ್ಪತ್ತು ಜನ ಮಹಿಳೆಯರು ಮತ್ತು ಪುರುಷರು ಕೈಯಲ್ಲಿ ನೋಟು ಹಿಡಿದುಕೊಂಡು, ಪ್ರತಿಯೊಬ್ಬ ಸಂನ್ಯಾಸಿಗಳಿಗೆ ಅವರ ಶಕ್ತ್ಯಾನುಸಾರ ೨೦, ೧೦, ೫, ೨ ರ ನೋಟು ಕೊಟ್ಟು ಪ್ರಣಾಮ ಮಾಡಿ ಹೋದರು. ಸುಮಾರು ೧೬೦ ರೂಪಾಯಿ ಕಾಣಿಕೆ ಸಿಕ್ಕಿತು. ನಡೆದ ಘಟನೆ ನನಗೆ ನಂಬಲು ಸಾಧ್ಯವಾಗಲಿಲ್ಲ. ಆವೇಶ, ಉದ್ವೇಗದಿಂದ ನನ್ನ ಕಣ್ಣಲ್ಲಿ ನೀರು ತುಂಬಿತು. ಬಹಳ ಕಷ್ಟಪಟ್ಟು ಬಿಕ್ಕಿ ಬಿಕ್ಕಿ ಅಳುವುದನ್ನು ನಿಯಂತ್ರಣ ಮಾಡಿಕೊಂಡೆ. ನನ್ನ ಮೊಂಡುತನ (pig headedness ) ದಿಂದ ಈ ಕಾಣಿಕೆಯನ್ನು ಶ್ರೀಮಾತೆಯವರಿಂದ ಬಲವಂತವಾಗಿ ಪಡೆದ ಉರಿಯ ಅನುಭವವಾಯಿತು. ಈ ಲೋಕದಲ್ಲಿ ಮಿಲಿಯಗಟ್ಟಲೆ ನಾಸ್ತಿಕರು ಇರುವಾಗ ನಾನು ಬಯಸಿದ ರೀತಿಯಲ್ಲಿಯೇ ಶ್ರೀಮಾತೆಯವರು ತಮ್ಮ ದೈವತ್ವ ತೋರಿಸುವ ತೊಂದರೆ ಯಾಕೆ ತೆಗೆದುಕೊಳ್ಳಬೇಕು? ಇದರ ಬದಲು ಶ್ರೀಮಾತೆಯವರು ನನ್ನ ದುರಹಂಕಾರಕ್ಕೆ ಶಿಕ್ಷೆ ನೀಡಬೇಕಾಗಿತ್ತು. ಬಹುಶಃ ನನ್ನ ಗುರುದೇವರು ಶ್ರೀಮಾತೆಯವರ ಹತ್ತಿರ ಮಧ್ಯಸ್ಥಿಕೆ ಮಾಡಿ (intercede) ನಾನು ಬಯಸಿದ ರೀತಿಯಲ್ಲಿ ಸಮಾಧಾನಪಡಿಸಿರಬೇಕು. ಪೂಜ್ಯ ಅಮ್ಮ, ನಾನು ಸದಾ ನಿಮ್ಮ ಗುಲಾಮ. ಯಾವ ಜನ್ಮದಲ್ಲಿಯೂ ನಿಮ್ಮನ್ನು ಮರೆಯುವುದಿಲ್ಲ.



## ಜತೀಂದ್ರನಾಥನ ಸೇವಾದರ್ಶ

ಭಾರತಕ್ಕೆ ಸ್ವಾತಂತ್ರವನ್ನು ಒದಗಿಸಿಕೊಡುವಲ್ಲಿ ಕ್ರಾಂತಿಕಾರಿ ಜತೀಂದ್ರನಾಥನ ಸೇವೆ ಮಹತ್ವಪೂರ್ಣವಾದುದು. ಒಂದು ದಿನ ಯತೀಂದ್ರನಾಥ ಕಲ್ಕತ್ತಾದ ರಸ್ತೆಯಲ್ಲಿ ನಡೆದುಕೊಂಡು ಹೋಗುತ್ತಿದ್ದ. ಅವು ಕಡುಬಿಸಿಲಿನ ದಿನಗಳು. ರಸ್ತೆಯಲ್ಲಿ ಒಂದು ಕಡೆ ಒಂದು ದೊಡ್ಡ ಗುಂಪು ಒಟ್ಟುಗೂಡಿತ್ತು. ಜತೀಂದ್ರನಾಥ ಗುಂಪಿನೊಳಗೆ ದಾರಿ ಮಾಡಿಕೊಂಡು ಹೋಗಿ ನೋಡಿದಾಗ ಅಲ್ಲಿ ಒಬ್ಬ ವೃದ್ಧ ಮಹಿಳೆ ಬಿಸಿಲಿನ ಬೇಗೆಯಿಂದ ಬಳಲಿ ಬಿದ್ದಿದ್ದಳು. ಅವಳ ತಲೆಯ ಮೇಲಿದ್ದ ದೊಡ್ಡ ಗಂಟು ಕೆಳಗೆ ಬಿದ್ದು ಚೆದುರಿಹೋಗಿತ್ತು. ಎಲ್ಲರೂ ಬಾಯಿಮಾತಿನ ಸಹಾನುಭೂತಿಯನ್ನು ಹೇಳಿದರೇ ಹೊರತು, ಯಾರೂ ಅವಳಿಗೆ ಸಹಾಯ ಮಾಡಲು ಮುಂದೆ ಬರಲಿಲ್ಲ. ಜತೀಂದ್ರನಾಥ ಆ ವೃದ್ಧೆಯನ್ನು ಕೈಹಿಡಿದು ಮೇಲೆ ಎತ್ತಿದ. ಅವಳ ಗಂಟನ್ನು ಹಿಡಿದುಕೊಂಡು, ಮನೆಯವರೆಗೆ ಕರೆದುಕೊಂಡು ಹೋದ. ಮನೆಗೆ ತಲುಪಿಸಿ ಕೇಳಿದ, ''ಅಜ್ಜಿ, ನಿನಗೆ ಮಕ್ಕಳು-ಮೊಮ್ಮಕ್ಕಳು ಯಾರೂ ಇಲ್ಲವೆ?'' ಅಜ್ಜಿ ಕಂಬನಿದುಂಬಿ,'' ಮಗು, ನನ್ನ ಒಬ್ಬನೇ ಮಗನನ್ನು ಮಹಾಮಾರಿ ಕಸಿದುಕೊಂಡಿತು. ಈಗ ಸೌದೆ ಮೂಟೆಗಳನ್ನು ಹೊತ್ತು, ಮಾರಿ ಹೊಟ್ಟೆಯ ಹಸಿವನ್ನು ನೀಗಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದೇನೆ.'' ಯತೀಂದ್ರನಿಗೆ ಬಹಳ ದುಃಖವಾಯಿತು. ''ಅಮ್ಮ, ನಿನ್ನ ಈ ಮಗ ಬದುಕಿರುವಾಗ ನೀನು ಹೊಟ್ಟೆ ಪಾಡಿಗಾಗಿ ಒದ್ದಾಡುವಂತಾಗಬಾರದು.'' ಹೀಗೆ ಹೇಳುತ್ತ ಅವನು ಅಜ್ಜಿಯ ಪಾದಗಳಿಗೆ ಬಾಗಿ ನಮಸ್ಕರಿಸಿ, ಕೆಲವು ರೂಪಾಯಿಗಳನ್ನು ಅರ್ಪಿಸಿದ. ಜೀವನವಿಡೀ ಅವನು ಆ ಅಜ್ಜಿಯನ್ನು ತನ್ನ ತಾಯಿಯೆಂಬಂತೆ ನೋಡಿಕೊಂಡ.

*(ಕೃಪೆ : 'ಕಲ್ಯಾಣ' ಮಾಸಪತ್ರಿಕೆ, ಅನು: ಮಾತಾ ತ್ಯಾಗಮಯೀ)*

# ಶ್ರೀಮಾತೆಯವರ ಕೃಪೆ

ಭಾಗ ೧

ಬಂಗಾಳಿ ಮೂಲ: **ಸ್ವಾಮಿ ಅಪೂರ್ವಾನಂದ**

ಅನು: ಸ್ವಾಮಿ ಜ್ಞಾನಯೋಗಾನಂದ



ಶ್ರೀಮಾತೆಯವರ ದರ್ಶನ ಹಾಗೂ ಕೃಪೆಗೆ ಪಾತ್ರರಾದ ಶಿಷ್ಯಂದಿರಲ್ಲಿ ಕೆಲವರು ಅವರ ಪ್ರಥಮ ಭೇಟಿ, ಅವರಿಂದ ದೀಕ್ಷೆ ಪಡೆದ ಬಗೆ ಹಾಗೂ ಅವರ ಅಸೀಮ ಪ್ರೀತಿಯನ್ನು ಕುರಿತು ತಮ್ಮ ಸ್ಮೃತಿಕಥನಗಳಲ್ಲಿ ಬರೆದಿದ್ದಾರೆ. ಬಂಗಾಳಿ ಭಾಷೆಯಲ್ಲಿ ಪ್ರಕಟವಾಗಿರುವ **'ಮಾಯೇರ್ ಪದ ಪ್ರಾಂತೇ'** ಎಂಬ ನಾಲ್ಕು ಸಂಪುಟಗಳ ಗ್ರಂಥದಲ್ಲಿ ಬರುವ ಈ ಸ್ಮೃತಿಚಿತ್ರದ ಲೇಖಕರು ಶ್ರೀಮಾತೆಯವರ ಶಿಷ್ಯರು. ಕೆಲವು ಕಾಲ ಅವರ ಸೇವೆ ಮಾಡುವ ಭಾಗ್ಯವನ್ನೂ ಅವರು ಪಡೆದಿದ್ದರು. *(-ಸಂ)*

ಕ್ರಿ.ಶ. ೧೯೧೮ನೇ ಇಸವಿ ನನ್ನ ಜೀವನದಲ್ಲಿ ಸ್ಮರಣಾರ್ಹವಾದ ವರ್ಷ. ಆ ವರ್ಷವೇ ನಾನು ಶ್ರೀಮಾತೆಯವರ ಸನ್ನಿಧಿಗೆ ತೆರಳಿದೆ; ಈ ಯುಗದ ಪುಣ್ಯಪೀಠವಾಗಿರುವ ಬೇಲೂರು ಮಠದ ದರ್ಶನ ಹಾಗೂ ಶ್ರೀರಾಮಕೃಷ್ಣರ ಐದು ಜನ ಶಿಷ್ಯರ – ಸ್ವಾಮಿ ಬ್ರಹ್ಮಾನಂದ, ಸ್ವಾಮಿ ಶಿವಾನಂದ, ಸ್ವಾಮಿ ಶಾರದಾನಂದ, ಸ್ವಾಮಿ ತುರೀಯಾನಂದ ಹಾಗೂ ಸ್ವಾಮಿ ಸುಬೋಧಾನಂದರ ದರ್ಶನ ಲಾಭವನ್ನು ಪಡೆದೆ.

ಕೋಜಾಗರಿ ಲಕ್ಷ್ಮೀಪೂಜೆಯ ನಂತರ ಕೆಲವು ದಿನಗಳು ಕಳೆದಿದ್ದವು; ಆಗ ನಾನು ಮೊದಲ ಬಾರಿಗೆ ಬೇಲೂರು ಮಠಕ್ಕೆ ಹೋಗಿ ಅಲ್ಲಿ ಎಂಟು–ಹತ್ತು ದಿನಗಳ ಕಾಲ ತಂಗಿದ್ದೆ. ಬೇಲೂರು ಮಠವನ್ನು ದರ್ಶಿಸಿದ್ದೂ ಒಂದು ಕಥೆ. ಒಂದು ಸಲ ನಾನು ಕನಸಿನಲ್ಲಿ ಬೇಲೂರು ಮಠ ಹಾಗೂ ಸ್ವಾಮಿ ಶಿವಾನಂದರನ್ನು ಕಂಡಿದ್ದೆ. ಮಹಾಪುರುಷ ಮಹಾರಾಜರಿಗೆ (ಸ್ವಾಮಿ ಶಿವಾನಂದರು) ಈ ಕನಸಿನ ವಿವರವನ್ನು ಪತ್ರದ ಮೂಲಕ ತಿಳಿಸಿ, ಬೇಲೂರು ಮಠದ ದರ್ಶನ ಪಡೆಯಲು ಅನುಮತಿ ಕೋರಿದ್ದೆ. ಅವರು ಅದಕ್ಕೆ ಅನುಮತಿ ನೀಡಿದ್ದರು. ಆ ಅನುಮತಿ ಪತ್ರವನ್ನು ಓದಿದ ನಾನು ಬೇಲೂರು ಮಠದ ಕಡೆ ಹೊರಟಿದ್ದೆ. ಬೇಲೂರು ಮಠವನ್ನು ತಲುಪಿ ನೋಡಿದೆ, ನಾನು ಕನಸಿನಲ್ಲಿ ಕಂಡ ಅದೇ ಬೇಲೂರು ಮಠ ಅದಾಗಿತ್ತು.

ಮೆಟ್ಟಿಲನ್ನೇರಿ ಬಂದು ಮೊದಲ ಅಂತಸ್ತಿನಲ್ಲಿದ್ದ ಶ್ರೀರಾಮಕೃಷ್ಣರ ಮಂದಿರವನ್ನು (ಹಳೆಯ ಮಂದಿರ) ಪ್ರವೇಶಿಸಿ, ಪ್ರಣಾಮ ಮಾಡುತ್ತಲೇ ನನ್ನ ಇಡೀ ಮನಸ್ಸು, ಪ್ರಾಣಗಳೆಲ್ಲ ಆನಂದದಿಂದ ತುಂಬಿಹೋಯಿತು.

ಸ್ವಲ್ಪ ಸಮಯದ ನಂತರ ಎದ್ದು ಮೆಟ್ಟಿಲಿಳಿದು ಬಂದು, ಮಹಾಪುರುಷ ಮಹಾರಾಜರ ದರ್ಶನ ಮಾಡಿಸಲು ಒಬ್ಬರು ಸಂನ್ಯಾಸಿಗಳನ್ನು ಪ್ರಾರ್ಥಿಸಿಕೊಂಡಾಗ, ಅವರು ನನ್ನನ್ನು ಅವರ ಕೋಣೆಗೆ ಕರೆದುಕೊಂಡು ಹೋದರು. ಮಠದ ಕಟ್ಟಡದ ಮೇಲಕ್ಕೆ ಮೆಟ್ಟಿಲಿನಿಂದ ಏರಿ ಹೋದಾಗ, ಅಲ್ಲಿ ಒಬ್ಬರು ದಿವ್ಯಕಾಂತಿಯಿಂದ ಕೂಡಿದ, ಶಾಂತಭಾವದ ದೃಷ್ಟಿಯಿಂದ ಕೂಡಿದ್ದ ತೇಜಸ್ವೀ ಸಂನ್ಯಾಸಿಯೊಬ್ಬರನ್ನು ನೋಡುತ್ತಲೇ ನನ್ನ ಮನಸ್ಸು ನನಗೆ ಹೇಳಿತು, 'ಇವರೇ ನಾನು ಕನಸಿನಲ್ಲಿ ಕಂಡ ಮಹಾಪುರುಷ ಮಹಾರಾಜರು.' ಅವರು ಸ್ನೇಹಪೂರಿತ ದೃಷ್ಟಿಯಿಂದ ನನ್ನತ್ತ ನೋಡಿದರು. ಕೃಪೆ ಮತ್ತು ಕರುಣೆಗಳ ಪ್ರವಾಹ ನನ್ನೆಡೆಗೆ ಹರಿಯುತ್ತಿದೆಯೋ ಎಂಬಂತಿತ್ತು ಅವರ ದೃಷ್ಟಿ. ನಾನು ಸಂಪೂರ್ಣ ಶರಣಾಗತನಾದವನಂತೆ ಅವರ ಚರಣಗಳಿಗೆ ಪ್ರಣಾಮ ಮಾಡಿದೆ. ಅವರಿಂದ ಮಂತ್ರದೀಕ್ಷೆ ಪಡೆಯಲು ಪ್ರಾರ್ಥಿಸಿಕೊಂಡಾಗ ಅವರು, ''ನಾನಂತೂ ಯಾರಿಗೂ ದೀಕ್ಷೆ ಕೊಡುವುದಿಲ್ಲ. ಶ್ರೀರಾಮಕೃಷ್ಣರೇ ನಿನ್ನ ಗುರು. ನೀನು ಪತಿತ ಪಾವನರಾದ ಶ್ರೀರಾಮಕೃಷ್ಣರ ನಾಮಜಪ ಮಾಡು. ಇದರಿಂದಲೇ ನಿನಗೆ ಮಂಗಳವಾಗುವುದು. ಮುಂದೆ ನಿನಗೆ ದೀಕ್ಷೆಯ ಆವಶ್ಯಕತೆ ಬಿದ್ದರೆ, ಅದಕ್ಕೂ ಅವರೇ ವ್ಯವಸ್ಥೆ ಮಾಡುವರು'' ಎಂದರು.

ಎರಡು ಮೂರು ದಿನ ಬೇಲೂರು ಮಠದಲ್ಲಿ ತಂಗಿದ್ದು, ಬಳಿಕ ಒಂದು ದಿನ ಬೆಳಿಗ್ಗೆ ಯಥಾಪ್ರಕಾರ ಮಹಾಪುರುಷ ಮಹಾರಾಜರಿಗೆ ಪ್ರಣಾಮ ಮಾಡಲು ಹೋದಾಗ ಅವರು ತಾವಾಗಿಯೇ ಶ್ರೀಮಾತೆಯವರ ವಿಷಯ ಪ್ರಸ್ತಾಪ ಮಾಡಿ ಹೇಳಿದರು, ''ನೀನು ಶ್ರೀಮಾತೆಯವರನ್ನು ನೋಡಿಲ್ಲವೆ?'' ''ನೋಡಿಲ್ಲ.'' ''ನಿನ್ನ ಮಹಾಭಾಗ್ಯ – ಈ ಸಮಯದಲ್ಲಿ ಶ್ರೀಮಾತೆಯವರು ಬಾಗ್‌ಬಜಾರಿನ 'ಉದ್ಬೋಧನ'ದಲ್ಲಿದ್ದಾರೆ. ಅವರ ದರ್ಶನ ಪಡೆಯಲು ಹೋಗು. ಬಲರಾಮ ಮಂದಿರದಲ್ಲಿ ರಾಜಾ ಮಹಾರಾಜ್, ಹರಿ ಮಹಾರಾಜ್ (ಸ್ವಾಮಿ

ತುರೀಯಾನಂದರು) ಇದ್ದಾರೆ. ಅವರ ದರ್ಶನವನ್ನು ಮಾಡು'' ಎಂದರು. ಮರುದಿನ ಬೆಳಿಗ್ಗೆ ಅಲ್ಲಿಗೆ ಹೋಗಲು ಅವರು ಹೇಳಿದರು. ಮತ್ತೆ ಮುಂದುವರಿಸುತ್ತ ಅವರೆಂದರು, '' 'ಉದ್ಬೋಧನ'ಕ್ಕೆ ಹೋಗಿ ರಾಜಾ ಮಹಾರಾಜ್ (ಸ್ವಾಮಿ ಬ್ರಹ್ಮಾನಂದರು), ಶರತ್ ಮಹಾರಾಜ್ (ಸ್ವಾಮಿ ಶಾರದಾನಂದರು) ಹಾಗೂ ಬಲರಾಮ ಮಂದಿರಕ್ಕೆ ಹೋಗಿ ಹರಿ ಮಹಾರಾಜ್ ಅವರ ದರ್ಶನ ಮಾಡಿ ಹೇಳು, ನಾನು ನಿನ್ನನ್ನು ಬೇಲೂರು ಮಠದಿಂದ ಕಳುಹಿಸಿದ್ದೇನೆ ಅಂತ.''

ಮರುದಿನ ಬೆಳಿಗ್ಗೆ ದೋಣಿಯಲ್ಲಿ ನಾನು ಬಾಗ್‌ಬಜಾರಿಗೆ ಹೋಗಿ ತಲುಪಿದೆ. ದೋಣಿಯಿಂದ ಇಳಿದು ದಾರಿ ಕೇಳುತ್ತ 'ಉದ್ಬೋಧನ' ತಲುಪಿದಾಗ, ಅಲ್ಲಿ ಬಾಗಿಲ ಬಳಿ ಒಂದು ಕುದುರೆ ಗಾಡಿ ನಿಂತಿದ್ದುದನ್ನು ಕಂಡೆ. ನಾನು ತಲುಪುವಷ್ಟರಲ್ಲೇ ಕುದುರೆಗಾಡಿ ಅಲ್ಲಿಂದ ಹೊರಟುಹೋಯಿತು. 'ಉದ್ಬೋಧನ'ದ ಒಳಗೆ ಪ್ರವೇಶಿಸುವಷ್ಟರಲ್ಲೇ ಒಬ್ಬರು ಸಾಧುಗಳು, ''ಶ್ರೀಮಾತೆ ಈಗ ತಾನೇ ಕುದುರೆಗಾಡಿಯಲ್ಲಿ ಹೊರಗಡೆ ಹೊರಟು ಹೋದರು. ಅವರು ಬಲರಾಮ ಮಂದಿರಕ್ಕೆ ಹೋಗಿದ್ದಾರೆ. ಈಗ ಅವರ ದರ್ಶನ ಸಾಧ್ಯವಿಲ್ಲ. ಸಾಯಂಕಾಲ ಮಹಿಳಾಭಕ್ತರ ದರ್ಶನದ ಸಮಯ. ನಾಳೆ ಬೆಳಿಗ್ಗೆ ವರೆಗೆ ಶ್ರೀಮಾತೆಯವರ ದರ್ಶನ ಸಾಧ್ಯವಿಲ್ಲ'' ಎಂದರು.

ಶ್ರೀಮಾತೆಯವರ ದರ್ಶನವಾಗಲಿಲ್ಲ ಎಂದು ನನ್ನ ಮನಸ್ಸು ತುಂಬ ದುಃಖದಿಂದ ಕುಗ್ಗಿಹೋಯಿತು. ಅಷ್ಟರಲ್ಲಿ ಸ್ಥೂಲಕಾಯದ ಒಬ್ಬರು ತೇಜಸ್ವೀ ಸಾಧುಗಳು ಗಂಗಾಸ್ನಾನ ಮಾಡಿ ಹಿಂದಿರುಗಿದ್ದರು. ಒದ್ದೆಯಾದ ಅಡ್ಡಪಂಚೆ, ಹೆಗಲಲ್ಲಿ ಮಡಚಿದ್ದ ಒದ್ದೆ ವಸ್ತ್ರ, ಕೈಯಲ್ಲಿ ಗಂಗಾಜಲವಿದ್ದ ಕಮಂಡಲ – ಇವುಗಳಿಂದ ಕೂಡಿದ್ದ ಅವರು ನಾನು ಪ್ರಣಾಮ ಮಾಡಲು ಹೋದಾಗ ಗಂಭೀರವಾಗಿ, ''ನಿಲ್ಲು ! ಮೊದಲು ಕಾಲು ತೊಳೆದುಕೊಳ್ಳುತ್ತೇನೆ'' ಎಂದರು. ಹಿಂದೆ ಕಂಡಿದ್ದ ಸಾಧುಗಳು ಹೇಳಿದರು, ''ಇವರೇ ಸ್ವಾಮಿ ಶಾರದಾನಂದರು.'' ಕಾಲು ತೊಳೆದು ಬಂದು ವರಾಂಡದಲ್ಲಿ ನಿಂತ ಅವರಿಗೆ ಪ್ರಣಾಮ ಮಾಡಿ, ಶ್ರೀಮಾತೆಯವರ ದರ್ಶನ ಪಡೆಯುವ ಪ್ರಾರ್ಥನೆಯನ್ನು ಅವರಿಗೆ ತಿಳಿಸಿದೆ. ಪೂಜ್ಯ ಮಹಾಪುರುಷ ಮಹಾರಾಜರು ನನ್ನನ್ನು ಕಳುಹಿಸಿದ್ದಾರೆ ಎಂದೂ ನಾನು ತಿಳಿಸಿದೆ. ಆ ದಿನ ಶ್ರೀಮಾತೆಯವರ ದರ್ಶನವಾಗುವ ಸಂಭವವಿಲ್ಲ ಎಂದು ಸ್ವಾಮಿ ಶಾರದಾನಂದರೂ ಕೂಡ ಹೇಳಿದರು. ಮರುದಿನ ಬೆಳಿಗ್ಗೆ ಶ್ರೀಮಾತೆಯವರ ದರ್ಶನ ಮಾಡಬಹುದು ಎಂದರು. ಅನಂತರ 'ಉದ್ಬೋಧನ' ದಲ್ಲಿದ್ದ ಇನ್ನೂ ಒಂದಿಬ್ಬರು ಸಾಧುಗಳಿಗೆ ಪ್ರಣಾಮ ಮಾಡಿ, ಬಲರಾಮ ಮಂದಿರದಲ್ಲಿದ್ದ ರಾಜಾ ಮಹಾರಾಜ್ ಮತ್ತು ಹರಿ ಮಹಾರಾಜ್ ಅವರ ದರ್ಶನಕ್ಕಾಗಿ ಅಲ್ಲಿಗೆ ಹೋದೆ. ಬಲರಾಮ ಮಂದಿರದಲ್ಲಿ ರಾಜಾ ಮಹಾರಾಜರ ದರ್ಶನ ಪಡೆದೆ. ಶ್ರೀರಾಮಕೃಷ್ಣರ ದರ್ಶನಭಾಗ್ಯವಂತೂ ನನಗೆ ದೊರಕಲಿಲ್ಲ. ಅವರ ಮಾನಸಪುತ್ರರಾದ ರಾಜಾ ಮಹಾರಾಜರನ್ನು ಸಶರೀರವಾಗಿ ನೋಡುವ ಹಾಗೂ ಪ್ರಣಾಮ ಮಾಡುವ ಭಾಗ್ಯವಾದರೂ ದೊರೆಯಿತಲ್ಲಾ ಎಂದು ನಾನು ಸಂತಸಪಟ್ಟೆ. ಆದರೆ ನನಗೆ ಹರಿ ಮಹಾರಾಜರ ದರ್ಶನ ಸಿಗಲಿಲ್ಲ. ಅವರ ಸೇವಕ ಮಹಾರಾಜರು ಹೇಳಿದರು, ''ಸಾಯಂಕಾಲದ ನಂತರವಷ್ಟೇ ಅವರ ದರ್ಶನ ಸಾಧ್ಯ. ಈಗ ಸಾಧ್ಯವಿಲ್ಲ.'' ಸಾಯಂಕಾಲದ ನಂತರ ಬಲ ರಾಮ ಮಂದಿರದ ಕಡೆಗೆ ಮತ್ತೆ ಹೊರಟೆ. ಹರಿ ಮಹಾರಾಜರ ಸೇವಕ ಮಹಾರಾಜರನ್ನು ಭೇಟಿಯಾದೆ.

ಸೇವಕ ಮಹಾರಾಜರು ನನ್ನನ್ನು ಹರಿ ಮಹಾರಾಜರ ಕಡೆಗೆ ಕರೆದುಕೊಂಡು ಹೋದರು. ನಾನು ತಲೆಯನ್ನು ನೆಲಕ್ಕೆ ಸ್ಪರ್ಶಿಸಿ ಅವರಿಗೆ ಪ್ರಣಾಮ ಮಾಡಿ, ಅನಂತರ ಅವರ ಪಾದಗಳನ್ನು ಸ್ಪರ್ಶಿಸಿದೆ. ಪಕ್ಕದಲ್ಲಿದ್ದ ಒಂದು ಸಣ್ಣ ಬೆಂಚಿನಲ್ಲಿ ಕುಳಿತುಕೊಳ್ಳಲು ಹೇಳಿದ ಅವರು, ನನ್ನೊಂದಿಗೆ ಸ್ನೇಹಪೂರ್ವಕವಾಗಿ ಮಾತುಕತೆಯಾಡಲು ಆರಂಭಿಸಿದರು. ಶ್ರೀಮಾತೆಯವರ ದರ್ಶನವಾಗಲಿಲ್ಲ ಎಂಬ ಕಾರಣಕ್ಕಾಗಿ ನನ್ನ ಮನಸ್ಸು ತುಂಬಾ ದುಃಖದಿಂದ ಕೂಡಿತ್ತು. ಕರುಣೆಯಿಂದ ಕೂಡಿದ ಧ್ವನಿಯಲ್ಲಿ ಅವರು ಹೇಳಿದರು, ''ಶ್ರೀಮಾತೆಯವರ ದರ್ಶನ ಅಷ್ಟೊಂದು ಸುಲಭದ ಮಾತೆ? ಅವರು ನಿನ್ನ ಅಂತರಂಗದ ವ್ಯಾಕುಲತೆಯನ್ನು ಹೆಚ್ಚಿಸುವುದಕ್ಕಾಗಿಯೇ ಇಂದು ದರ್ಶನ ಕೊಡಲಿಲ್ಲ. ಆಮೇಲೆ ನಿನಗೆ ಅವರ ದರ್ಶನ ಲಭಿಸೀತು. ಅದಕ್ಕಾಗಿ ದುಃಖಿಸಬೇಡ. ನಿನ್ನ ಮನಸ್ಸಿನಲ್ಲಿ ಅವರನ್ನು ಕಾಣದೆ ವ್ಯಾಕುಲತೆ ಇನ್ನೂ ಹೆಚ್ಚಾದರೆ, ಅವರು ಸರಿಯಾದ ಸಮಯಕ್ಕೆ ನಿನಗೆ ದರ್ಶನ ನೀಡುವರು. ಅಳುತ್ತಳುತ್ತ ಅವರಲ್ಲಿ ಪ್ರಾರ್ಥಿಸಿಕೋ. ಅವರು ಪ್ರಸನ್ನರಾಗಿ ನಿನಗೆ ಖಂಡಿತ ದರ್ಶನ ನೀಡುವರು'' ಎಂದರು. ಶ್ರೀಮಾತೆಯವರ ದರ್ಶನ ಪಡೆಯುವುದರ ಹಿಂದೆ ಎಷ್ಟೊಂದು ಮಹತ್ವವಿದೆ, ಎಷ್ಟೊಂದು ಘನತೆಯಿದೆ ಎಂಬುದು ಆಗ ನನಗೆ ಗೊತ್ತಿರಲಿಲ್ಲ. ಅವರ ಮಾತನ್ನು ಕೇಳಿ ನನ್ನ ಮನಸ್ಸು ಶಾಂತವಾಯಿತು. ಅವರಿಗೆ ಪ್ರಣಾಮ ಮಾಡಿ, ನನ್ನ ನಿವಾಸಕ್ಕೆ ನಾನು ಹಿಂದಿರುಗಿದೆ.

ಮರುದಿನ ಬೆಳಿಗ್ಗೆ ಶ್ರೀಮಾತೆಯವರ ದರ್ಶನಕ್ಕೆ ಹೋಗಿದ್ದೆ; ಆದರೆ ಅವರ ದರ್ಶನವಾಗಲಿಲ್ಲ. ಸಾಧು ಮಹಾರಾಜರುಗಳು ಹೇಳಿದ್ದೇನೆಂದರೆ, ಅಂದು ಬೆಳಿಗ್ಗೆ ಏನೋ ವಿಶೇಷ ಕಾರಣದಿಂದಾಗಿ ಪುರುಷ ಭಕ್ತರಿಗೆ ದರ್ಶನವಿರುವುದಿಲ್ಲವೆಂದು. ಆದ ಕಾರಣ ಮರುದಿನ ಬೆಳಿಗ್ಗೆ ಹೋಗಲು ಹೇಳಿದರು. ಮನಸ್ಸು ಖಿನ್ನಗೊಂಡಿತು. ರಾಜಾ ಮಹಾರಾಜ್ ಮತ್ತು ಹರಿ ಮಹಾರಾಜರ ದರ್ಶನವನ್ನಾದರೂ ಪಡೆಯೋಣವೆಂದು ಬಲರಾಮ ಮಂದಿರಕ್ಕೆ ಹೋದೆ. ಅದೂ ಆಗಲಿಲ್ಲ. ದಿನವೆಲ್ಲ ನೂರು ಯುಗಗಳಂತೆ ಸುದೀರ್ಘವೆನಿಸತೊಡಗಿತು. ಎಷ್ಟೊಂದು ಧ್ಯಾನ, ಪ್ರಾರ್ಥನೆಗಳನ್ನು ಮಾಡಿದರೂ, ಮನಸ್ಸಿಡೀ ಶೂನ್ಯತೆ ಆವರಿಸಿಕೊಂಡಿತ್ತು; ಶೂಲದಿಂದ ಇರಿದಂತೆ ಎದೆ ಚಡಪಡಿಸತೊಡಗಿತು. ಸಾಯಂಕಾಲ ಮತ್ತೆ ಹರಿ ಮಹಾರಾಜರ ಬಳಿಗೆ ಹೋದೆ. ಅವರು ಹಲವು ರೀತಿಯಿಂದ ನನ್ನನ್ನು ಸ್ವಾಂತನಗೊಳಿಸಿದರು. ತುಂಬಾ ಸಮಯ ಅವರ ಬಳಿ ಕುಳಿತು, ಅವರ ಸ್ನೇಹದಲ್ಲಿ ಮುಳುಗಿದೆ. ಮನಸ್ಸಿಲ್ಲದ ಮನಸ್ಸಿನಿಂದ ಅವರ ಸಾನ್ನಿಧ್ಯದಿಂದ ಹೊರಬಂದೆ. ನನ್ನ ಜೀವ ಹೊಯ್ದಾಡುತ್ತಿತ್ತು ; ರಾತ್ರಿ ನಿದ್ದೆ ಬರಲಿಲ್ಲ.

ಒಬ್ಬ ಭಕ್ತನ ಮನೆಯಲ್ಲಿ ನಾನು ತಂಗಿದ್ದೆ. ಮರುದಿನ ಬೆಳಿಗ್ಗೆ ಗಂಗಾಸ್ನಾನ ಮಾಡಿ ಬಂದು ಆ ಭಕ್ತನ ಮನೆಯ ದೇವರ ಕೋಣೆ ಯಲ್ಲಿ ಧ್ಯಾನ ಮಾಡಲು ಕುಳಿತಿದ್ದೆ. ಆ ಅಲ್ಪ ಅವಧಿಯಲ್ಲೇ ಒಂದು ಅಲೌಕಿಕ ಘಟನೆ ನಡೆದುಹೋಯಿತು. ಆನಂದ, ವಿಸ್ಮಯಗಳಿಂದ ನಾನು ಬಾಹ್ಯಪ್ರಜ್ಞೆಯಿಲ್ಲದೆ ಸ್ವಲ್ಪಹೊತ್ತು ಕುಳಿತಲ್ಲೇ ಕುಳಿತಿದ್ದೆ. ಆಸನ ಬಿಟ್ಟು ಮೇಲಕ್ಕೆದ್ದಾಗ ಬೆಳಿಗ್ಗೆ ಸುಮಾರು ಆರೂವರೆ ಯಾಗಿತ್ತು. ಧ್ಯಾನದ ಆ ಸಮಯವನ್ನೇ ಮನಸ್ಸಿನಲ್ಲಿ ಭಾವಿಸುತ್ತ ಆಸೆ ತುಂಬಿದ ಮನಸ್ಸಿನಿಂದ 'ಉದ್ಬೋಧನ'ದತ್ತ ಹೊರಟೆ.

'ಉದ್ಬೋಧನ'ಕ್ಕೆ ಹೋದಾಗ ಅಲ್ಲಿ ೧೫-೨೦ ಮಂದಿ ಭಕ್ತರು ಆಗಲೇ ಶ್ರೀಮಾತೆಯವರ ದರ್ಶನಕ್ಕಾಗಿ ಕಾದು ನಿಂತಿದ್ದರು. ಶ್ರೀಮಾತೆಯವರ ದರ್ಶನ ಅಂದು ನಡೆಯುವುದು ಎಂದು ತಿಳಿದು ಬಂತು. ನಾನು ಆನಂದದಲ್ಲಿ ತೇಲಾಡಿದೆ. ಏಳೂವರೆ ಗಂಟೆಯಾದ ಮೇಲೆ ಒಬ್ಬರು ಸಾಧುಗಳು ಬಂದು, ಒಂದು ದೊಡ್ಡ ತಟ್ಟೆಯಲ್ಲಿ ಎಲೆಯ ಮೇಲೆ ಅಂದವಾಗಿ ಜೋಡಿಸಿದ್ದ ಪ್ರಸಾದವನ್ನು ಎಲ್ಲರಿಗೂ ನೀಡುತ್ತ, ''ಶ್ರೀಮಾತೆ ಪ್ರಸಾದ ಕಳುಹಿಸಿದ್ದಾರೆ. ಪ್ರಸಾದ ಸ್ವೀಕರಿಸಿ ಕಾಯುತ್ತಾ ನಿಂತಿರಿ. ಶ್ರೀಮಾತೆಯವರು ದರ್ಶನಕ್ಕಾಗಿ ಕರೆದಾಗ ಒಬ್ಬೊಬ್ಬರಾಗಿ ಬನ್ನಿ'' ಎಂದರು. ಮತ್ತೆ ಅವರು, ''ಶ್ರೀಮಾತೆ ತಮ್ಮ ಕೈಯಿಂದಲೇ ಭಕ್ತರಿಗಾಗಿ ಪ್ರಸಾದವನ್ನು ಅಂದವಾಗಿ ಜೋಡಿಸಿಟ್ಟು ಕಳುಹಿಸಿದ್ದಾರೆ '' ಎಂದರು. ಆ ಪ್ರಸಾದವನ್ನು ಸ್ವೀಕರಿಸುತ್ತ ತುಂಬಾ ಆನಂದವಾಯಿತು. ಶ್ರೀಮಾತೆ ಪ್ರಸನ್ನರಾಗಿ ತಮ್ಮ ಕೈಯಿಂದಲೇ ಪ್ರಸಾದ ಕಳುಹಿಸಿದ್ದಾರೆ! ಇದಕ್ಕಿಂತ ಹೆಚ್ಚಿನ ಭಾಗ್ಯ ಇನ್ನೇನಿದೆ? ಆ ಪ್ರಸಾದದಲ್ಲಿ ಶ್ರೀಮಾತೆಯವರ ಸ್ಪರ್ಶ, ಸ್ನೇಹ, ಮಮತೆಗಳಿದ್ದವು.

ಭಕ್ತರು ಮಾತನಾಡುತ್ತಿದ್ದರು: 'ಎದುರಿನ ಮೆಟ್ಟಿಲನ್ನೇರಿ ಹೋಗಿ ಶ್ರೀಮಾತೆಯವರ ದರ್ಶನ ಪಡೆದು, ಬಳಿಕ ಇನ್ನೊಂದು ಮೆಟ್ಟಿಲಿನಿಂದ ಇಳಿದು ಬರಬೇಕು', 'ಶ್ರೀಮಾತೆ ಪುರುಷ ಭಕ್ತ ರೊಂದಿಗೆ ಮಾತನಾಡಲಾರರು' ಇತ್ಯಾದಿ. ಇದಾವುದೂ ನನಗೆ ತಿಳಿ ದಿರಲಿಲ್ಲ. ಶ್ರೀಮಾತೆ ಪುರುಷ ಭಕ್ತರೊಂದಿಗೆ ಮಾತನಾಡುವುದಿಲ್ಲ ವೆಂಬ ವಿಷಯವನ್ನು ತಿಳಿದು ನನಗೆ ತುಂಬ ದುಃಖವಾಯಿತು. ನಾನೇನೋ 'ಅಮ್ಮಾ' ಎಂದು ಕರೆಯುತ್ತೇನೆ; ಅದಕ್ಕೆ ಅವರು ಓಗೊಡಲಾರರೆ? ಒಂದು ಮಾತನ್ನೂ ಆಡಲಾರರೆ? ಈ ಆಲೋಚನೆ ಗಳಿಂದ ನನ್ನ ಮನಸ್ಸು ನಾನಾ ಬಗೆಯಲ್ಲಿ ಛಿದ್ರಛಿದ್ರವಾಗತೊಡ ಗಿತು. ಅಷ್ಟರಲ್ಲಿ ಭಕ್ತರ ನಡುವೆ ಸದ್ದಾಗತೊಡಗಿತು. ಸಾಲಾಗಿ ಎಲ್ಲರೂ ಮೆಟ್ಟಿಲ ಮೂಲಕ ಮೇಲೇರಲು ತಯಾರಾಗಿ ನಿಂತರು. ಮೆಟ್ಟಿಲವರೆಗೂ ಅವರೆಲ್ಲ ಸಾಲಾಗಿ ನಿಂತರು. ನಾನು ಎಲ್ಲರಿಗಿಂತ ಕೊನೆಯಲ್ಲಿ ನಿಲ್ಲುತ್ತೇನೆ; ಎಲ್ಲರ ಕೊನೆಗೆ ನಾನು ಪ್ರಣಾಮ ಮಾಡು ತ್ತೇನೆ ಎಂದು ನಿರ್ಧರಿಸಿದೆ. ಹುಡುಗಬುದ್ಧಿ! ಕೊನೆಗೆ ನನಗೆ ಭಯ ವಾಯಿತು - ಒಂದು ವೇಳೆ ನನಗೆ ಪ್ರಣಾಮ ಮಾಡಲು ಸಾಧ್ಯ ವಾಗದೆ, ಶ್ರೀಮಾತೆ ಹೊರಟುಹೋದರೆ!

ಆದರೆ ಮುಂದೆ ಹೋಗಿ ಇನ್ನೇನಾದರೂ ಮಾಡುವುದು ಸಾಧ್ಯ ವಿರಲಿಲ್ಲ. ಆದ್ದರಿಂದ ಶ್ರೀಮಾತೆಯವರನ್ನೇ ಪ್ರಾರ್ಥಿಸುತ್ತ ಸಾಲಿನ ಕೊನೆಯಲ್ಲಿ ಹಾಗೆಯೇ ನಿಂತೆ. ಬೆಳಿಗ್ಗೆ ಧ್ಯಾನದ ಸಮಯದಲ್ಲಿ ಕಂಡ ದರ್ಶನ ನನ್ನೊಳಗೆ ಉಜ್ವಲವಾಗಿ ಬಂದು ನಿಂತಿತು. ಭಕ್ತರು ಶ್ರೀಮಾತೆಯವರಿಗೆ ಪ್ರಣಾಮ ಮಾಡಲು ಕ್ರಮೇಣ ಮುಂದುವರಿ ದರು. ಅವರ ಹಿಂದಿನಿಂದ ನಾನೂ ಮುಂದಕ್ಕೆ ಚಲಿಸಿದೆ. ಕೊನೆಗೆ ಮೆಟ್ಟಿಲನ್ನೇರಿ ಹೋದಾಗ, ಭಕ್ತರೆಲ್ಲ ಒಬ್ಬೊಬ್ಬರಾಗಿ ಹೋಗಿ, ಒಂದು ಕೋಣೆಯ ಬಾಗಿಲ ಮುಂದೆ ಹೊರಗಿನಿಂದಲೇ ನೆಲಕ್ಕೆ ಸಾಷ್ಟಾಂಗ ವೆರಗಿ ಪ್ರಣಾಮ ಮಾಡಿ, ಇನ್ನೊಂದು ಮೆಟ್ಟಿಲಿನಿಂದ ಇಳಿದು ಹೋಗುತ್ತಿದ್ದರು. ನಾನು ಮುಂದುವರಿದೆ - ನನ್ನ ಹಿಂದೆ ಇನ್ನಾರೂ ಇರಲಿಲ್ಲ. ಕೋಣೆಯ ಬಾಗಿಲ ಬಳಿ ಬಂದು ಪ್ರಣಾಮ ಮಾಡುವ ಸ್ಥಳದಲ್ಲಿ ನಿಂತು ನೋಡಿದೆ - ಶ್ರೀಮಾತೆಯವರು ಆಪಾದಮಸ್ತಕವೆಲ್ಲ ಒಂದು ಉಣ್ಣೆಯ ಬಟ್ಟೆಯಿಂದ ಹೊದ್ದುಕೊಂಡು, ಅವಗುಂಠನ ಧರಿಸಿ ಕುಳಿತಿದ್ದಾರೆ. ಶ್ರೀಮಾತೆಯವರ ಪಾದಗಳೂ ಕಾಣಿಸುತ್ತಿಲ್ಲ. ಅವನ್ನೂ ಮುಚ್ಚಿಬಿಟ್ಟಿದ್ದರು. ನನ್ನ ಮನಸ್ಸಿಗೆ ಬೇಸರವಾಯಿತು. ಅಲ್ಲಿ ಹೆಚ್ಚು ಹೊತ್ತು ಕಳೆಯಲು ಸಮಯವಿರಲಿಲ್ಲ. ನಾನೂ ಮೊಣಕಾ ಲೂರಿ ಬಗ್ಗಿ, ಸಾಷ್ಟಾಂಗ ನಮಸ್ಕಾರ ಮಾಡಿದೆ. ಸುಮಾರು ಮೂವತ್ತು - ನಲವತ್ತು ಸೆಕೆಂಡು ಅಥವಾ ಒಂದು ನಿಮಿಷ, ನಾನು ತಲೆಬಾಗಿಸಿ ಹಾಗೇ ಬಾಗಿದ್ದೆ - ನನ್ನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತ್ತು. ತಲೆಯೆತ್ತಿ ನೋಡಿದೆ, ಶ್ರೀಮಾತೆ ತಲೆಯ ಮೇಲಿನ ಸೆರಗನ್ನು ಸರಿಸಿ, ನನ್ನತ್ತ ಸ್ನೇಹಪೂರ್ವಕ ದೃಷ್ಟಿಯಿಂದ ನೋಡುತ್ತಿದ್ದಾರೆ. ನಾನು ಆನಂದದಿಂದ ವಿಹ್ವಲಗೊಂಡೆ. ಅವರ ಪಾದಸ್ಪರ್ಶ ಮಾಡಲು ಕೈಯನ್ನು ಚಾಚುತ್ತಿದ್ದಂತೆಯೇ ಶ್ರೀಮಾತೆ ಹಸನ್ಮುಖರಾಗಿ ನನ್ನ ಮುಖವನ್ನು ಸವರಿ, ನನ್ನ ಕಣ್ಣೀರನ್ನು ಒರೆಸಿದರು; ನನ್ನ ಕೆನ್ನೆಯನ್ನು ಸ್ಪರ್ಶಿಸಿ (ಕೈಯಿಂದ) ಚುಂಬಿಸಿದರು. ಮಧುರ ಧ್ವನಿಯಿಂದ ''ಮಗೂ, ಪ್ರಸಾದ ತೆಗೆದುಕೊಂಡೆಯಾ?'' ಎಂದು ಕೇಳಿದರು. ನಾನು ಅವರ ಮುಖವನ್ನೇ ನೋಡುತ್ತ, ''ಹೌದಮ್ಮಾ, ತಿಂದೆ'' ಎಂದೆ. ಅಷ್ಟು ಮಾತ್ರ ಆಗ ನಡೆದ ಮಾತುಕತೆ. ಶ್ರೀಮಾತೆಯವರ ಪ್ರೀತಿಯ ಸ್ಪರ್ಶ ಹಾಗೂ ಮಧುರವಾದ ಮಾತುಗಳು ನನ್ನ ಅಂತ ರಂಗವನ್ನು ತುಂಬಿಬಿಟ್ಟವು. ನಾನು ದಿಗ್ಭ್ರಮೆಗೊಂಡು ಶ್ರೀಮಾತೆ ಯವರನ್ನೇ ದಿಟ್ಟಿಸುತ್ತಿದ್ದೆ. ಬೆಳಿಗ್ಗೆ ಧ್ಯಾನ ಮಾಡುವಾಗ ನಾನು ಕಂಡದ್ದು ಇವರನ್ನೇ ಅಲ್ಲವೆ? ಅದೇ ತೆಳ್ಳನೆಯ, ಕೆಂಪಂಚಿನ ವಸ್ತ್ರ ವನ್ನುಟ್ಟಿದ್ದ ಮಾತೃಮೂರ್ತಿ ನನ್ನನ್ನು ಮಡಿಲಿಗೇರಿಸಿ, ಎದೆಗೊತ್ತಿ ಕೊಂಡು ನನ್ನನ್ನು ಚುಂಬಿಸಿ, ಆದರಿಸಿ, ಸ್ಪರ್ಶಿಸಿ ಎಷ್ಟೊಂದು ಮುದ್ದಾ ಡಿದ್ದರು! ಎಲ್ಲವೂ ಕನಸಿನಂತೆ ನನಗೆ ಭಾಸವಾಯಿತು. ಶ್ರೀಮಾತೆ ಯವರನ್ನೇ ಕೇಳೋಣವೇ ಅನ್ನಿಸಿತು. ಆದರೆ ಕೇಳಲಿಲ್ಲ. ಮತ್ತೊಮ್ಮೆ ಶ್ರೀಮಾತೆಯವರಿಗೆ ಪ್ರಣಾಮ ಮಾಡಿ, ಅವರಿಗೆ ವಿದಾಯ ಹೇಳಿದೆ. ಸ್ವಲ್ಪ ಮುಂದಕ್ಕೆ ಹೋಗಿ ಹಿಂದಿರುಗಿ ನೋಡಿದೆ - ನನ್ನತ್ತ ಸ್ನೇಹಪೂರ್ವಕವಾಗಿ ನೋಡುತ್ತ ಶ್ರೀಮಾತೆಯವರು ಇನ್ನೂ ಕುಳಿತೇ ಇದ್ದರು! ಅವರು ತಮ್ಮ ನೋಟದ ಮೂಲಕವೇ ನನ್ನನ್ನು ಆನಂದ ಪಡಿಸುತ್ತಿದ್ದರು. ಇಷ್ಟೊಂದು ವರ್ಷಗಳ ನಂತರ ನಾನು ಈಗ ಚೆನ್ನಾಗಿ ತಿಳಿದುಕೊಂಡಿದ್ದೇನೆ - ನಾನು ಎಷ್ಟೇ ದೂರ ಹೋದರೂ, ಅವರ ದೃಷ್ಟಿರೇಖೆಯನ್ನು ಮೀರಿ ಹೋಗಲು ನನ್ನಿಂದ ಅಸಾಧ್ಯವೆಂದು.

ಕೆಳಗಿಳಿದು ಬಂದ ನನಗೆ ಮೊದಲು ಅನ್ನಿಸಿದ್ದೆಂದರೆ, ನನ್ನ ಈ ಸೌಭಾಗ್ಯದ ಸಮಾಚಾರವನ್ನು ಓಡಿಹೋಗಿ ಹರಿ ಮಹಾರಾಜರಿಗೆ ತಿಳಿಸಿಬಿಡುತ್ತೇನೆ ಎಂದು. ಆಗ ಸಮಯ ಬೆಳಿಗ್ಗೆ ೮-೩೦ಯಾಗಿತ್ತು. ಅವರ ದರ್ಶನ ಸಿಗುವುದೇ ಇಲ್ಲವೇ ಎಂದು ಸಂದೇಹವುಂಟಾಯಿತು. ಅದರೊಂದಿಗೆ ಇನ್ನೊಂದು ಆಲೋಚನೆ: ಬೇಲೂರು ಮಠದಿಂದ ಹೊರಟುಬಂದು ಮೂರು ದಿನಗಳಾಗಿವೆ; ಆದರೆ ನಾನು ಬಂದಿದ್ದುದು ಒಂದು ದಿನ ಮಟ್ಟಿಗೆ ಮಾತ್ರ. ದರ್ಶನ ಇತ್ಯಾದಿಗಳನ್ನು ಮುಗಿಸಿಕೊಂಡು ಆಗಲೇ ಮರಳಿ ಹೋಗಬೇಕಾಗಿತ್ತು. ದರ್ಶನ ಪಡೆಯುವ ವಿಷಯದಲ್ಲಿ ತುಸು ಅನಿಶ್ಚಿತತೆಯಿದ್ದುದರಿಂದ ಬೇಲೂರು ಮಠಕ್ಕೆ ಹೇಳಿ ಕಳುಹಿಸುವುದೂ ಸಾಧ್ಯವಾಗಿರಲಿಲ್ಲ. ಹೀಗಾಗಿ ತಕ್ಷಣ ಬೇಲೂರು ಮಠಕ್ಕೆ ಹಿಂದಿರುಗಲು ನಿರ್ಧರಿಸಿದೆ.

ಪೂಜ್ಯ ಹರಿ ಮಹಾರಾಜರನ್ನು ಮತ್ತೆ ಜೀವಂತವಾಗಿ ಕಾಣಲಾಗಲಿಲ್ಲ. ಅವರ ಆಶೀರ್ವಾದದಿಂದಲೇ ನಾನು ಶ್ರೀಮಾತೆಯವರ ದರ್ಶನಭಾಗ್ಯವನ್ನು ಪಡೆದೆ. ಅವರು ತಮ್ಮ ಪುಣ್ಯ ದರ್ಶನದಿಂದ ನನ್ನ ದೇಹ, ಮನಸ್ಸುಗಳನ್ನು ಪವಿತ್ರಗೊಳಿಸಿದ್ದರು. ಶ್ರೀಮಾತೆಯವರ ದರ್ಶನಕ್ಕೆ ಇದ್ದ ಎಲ್ಲ ಅಡ್ಡಿಆತಂಕಗಳನ್ನು ಅವರು ತಮ್ಮ ಪ್ರಾರ್ಥನೆಯ ಮೂಲಕ ನಿವಾರಿಸಿದ್ದರು. ಅಷ್ಟೇ ಅಲ್ಲದೆ, ತಮ್ಮ ಶಕ್ತಿಯುತವಾದ ಪ್ರೇರಣೆಯಿಂದ ನನ್ನನ್ನು ಮುಂದಿನ ಆಧ್ಯಾತ್ಮಿಕ ಪಥದಲ್ಲಿ ಮುನ್ನಡೆಸಿದರು. ನನ್ನ ಅಂತರಂಗದ ಕೃತಜ್ಞತೆಯನ್ನು ಅವರಿಗೆ ತಿಳಿಸಲಾಗಲಿಲ್ಲ ಎಂದು ಈಗಲೂ ನನಗೆ ಖೇದವಾಗುತ್ತಿದೆ.

ಬೇಲೂರು ಮಠಕ್ಕೆ ಮರಳಿ ಹೋದ ನಾನು ಮಹಾಪುರುಷ ಮಹಾರಾಜರಿಗೆ ಎಲ್ಲವನ್ನೂ ವಿವರವಾಗಿ ತಿಳಿಸಿದೆ. ಅವರು ಆನಂದಗೊಂಡು ಹೇಳಿದರು, ''ನೀನು ಭಾಗ್ಯಶಾಲಿ. ಇಲ್ಲದಿದ್ದರೆ ಇದೆಲ್ಲ ಹೇಗೆ ಬಂದೊದಗುತ್ತಿತ್ತು? ಶ್ರೀಮಾತೆಯವರ ದರ್ಶನ ಮಾಡಿದ್ದೀಯಾ, ಅವರು ನಿನ್ನೊಡನೆ ಮಾತುಕತೆಯಾಡಿದ್ದಾರೆ, ನಿನ್ನನ್ನು ಆಶೀರ್ವದಿಸಿದ್ದಾರೆ. ಇದೆಲ್ಲ ಸಾಮಾನ್ಯ ವಿಷಯವೆ? ನಿನಗೆ ಒಳಿತಾಗುವುದು. ನಾನು ಹೇಳುತ್ತಿದ್ದೇನೆ, ನಿನಗೆ ತುಂಬಾ ಒಳ್ಳೆಯದಾಗುವುದು. ಶ್ರೀರಾಮಕೃಷ್ಣರು ನಿನ್ನ ಮೇಲೆ ಕೃಪೆ ಮಾಡಿದ್ದಾರೆ.''

ಈ ಬಾರಿ ಬೇಲೂರು ಮಠದಲ್ಲಿ ಎಂಟು, ಹತ್ತು ದಿನಗಳ ಕಾಲ ವಾಸವಾಗಿದ್ದು, ನನ್ನ ಆತ್ಮವನ್ನು ಬೇಲೂರು ಮಠದಲ್ಲಿ ಬಿಟ್ಟು, ದೇಹವನ್ನು ಮಾತ್ರ ಸಾಗಿಸಿಕೊಂಡು ಮನೆಗೆ ಮರಳಿದೆ.

೧೯೧೫ನೇ ಇಸವಿ ಆಗಸ್ಟ್ ತಿಂಗಳು. ಬಾಂಕುರಾ ಜಿಲ್ಲೆಯಲ್ಲಿ ದುರ್ಭಿಕ್ಷ ಪೀಡಿತ ಜನರಿಗಾಗಿ ರಾಮಕೃಷ್ಣ ಮಿಷನ್ ಪರಿಹಾರ ಕಾರ್ಯ ನಡೆಸುತ್ತಿತ್ತು. ಮಹಾಪುರುಷ ಮಹಾರಾಜರು ನನಗೆ ಪತ್ರ ಬರೆದರು: ''ಬಾಂಕುರಾ ಜಿಲ್ಲೆಯ ಇಂದುಪುರ ಪ್ರದೇಶದಲ್ಲಿ ನಮ್ಮ ಸಂಘದ ವತಿಯಿಂದ ಒಬ್ಬರು ಸಾಧುಗಳು ಸೇವಾಕಾರ್ಯವನ್ನು ಆರಂಭಿಸಿದ್ದಾರೆ. ಈಗ ಅಲ್ಲಿ ಒಬ್ಬ ಕಾರ್ಯಕರ್ತನ ಅಗತ್ಯವಿದೆ. ಈ ಪತ್ರವನ್ನು ಓದಿದ ಕೂಡಲೇ ನೀನು ಬೇಲೂರು ಮಠಕ್ಕೆ ಹೊರಟು ಬಾ. ನಿನ್ನನ್ನು ನಾನು ಬಾಂಕುರಾಗೆ ಪರಿಹಾರ ಕಾರ್ಯಕ್ಕಾಗಿ ಕಳುಹಿಸುತ್ತೇನೆ.'' ಪತ್ರವನ್ನು ಪಡೆದ ಎರಡು ಗಂಟೆಯೊಳಗಾಗಿ ನಾನು ಉಟ್ಟ ಬಟ್ಟೆಯಲ್ಲೇ ಮನೆಯನ್ನು ಬಿಟ್ಟು, ಬೇಲೂರು ಮಠದತ್ತ ಹೊರಟೆ. ಮಾರನೇ ದಿನ ಬೇಲೂರು ಮಠವನ್ನು ತಲುಪಿ, ಮಹಾಪುರುಷ ಮಹಾರಾಜರಿಗೆ ಪ್ರಣಾಮ ಮಾಡಿದಾಗ ಅವರು ಆನಂದಗೊಂಡು, ''ಬಂದೆಯಾ? ಒಳ್ಳೆಯ ಕೆಲಸ ಮಾಡಿದೆ. ಇಂದು ರಾತ್ರಿಯೇ ನೀನು ಬಾಂಕುರಾಗೆ ಹೊರಡಬೇಕು'' ಎಂದರು.

ಇಂದುಪುರಕ್ಕೆ ಹೋಗಿ ಅಲ್ಲಿ ನಡೆಯುತ್ತಿದ್ದ ಪರಿಹಾರಕಾರ್ಯದಲ್ಲಿ ಸೇರಿಕೊಂಡೆ. ಶ್ರೀಮಾತೆ ಹುಟ್ಟಿದ ಊರು ಕೂಡ ಬಾಂಕುರಾ ಜಿಲ್ಲೆಯಲ್ಲೇ ಇದೆ; ಆಗ ಶ್ರೀಮಾತೆ ಕೂಡ ಜಯರಾಮಬಾಟಿಯಲ್ಲಿದ್ದರು. ಶ್ರೀಮಾತೆಯವರ ದರ್ಶನ ಮಾಡಲು ಹಾಗೂ ಅವರ ಕೃಪೆಯನ್ನು ಹೊಂದಲು ಇದು ಪ್ರಶಸ್ತವಾದ ಸಂದರ್ಭವೆಂದು ಮನಸ್ಸಿನಲ್ಲೇ ಭಾವಿಸಿದ್ದೆ. ಮಹಾಪುರುಷ ಮಹಾರಾಜರಿಗೆ ನನ್ನ ಮನಸ್ಸಿನ ಇಚ್ಛೆಯನ್ನು ತಿಳಿಸಿ ನಾನು ಪತ್ರ ಬರೆದೆ. ಅವರು ದಯೆ ತೋರಿ ನನ್ನ ದೀಕ್ಷೆಯ ಸಂಬಂಧವಾಗಿ ಶ್ರೀಮಾತೆಯವರಿಗೆ ಪತ್ರ ಬರೆದರೆ, ಆಗ ಶ್ರೀಮಾತೆಯವರ ಕೃಪೆಯನ್ನೂ (ಅಂದರೆ ಮಂತ್ರದೀಕ್ಷೆಯನ್ನೂ) ಪಡೆಯುವುದು ಸಾಧ್ಯವಾಗಬಹುದು – ಇದು ನನ್ನೆಣಿಕೆ.

ನನ್ನ ಪತ್ರವನ್ನು ಓದಿದ ಮಹಾಪುರುಷ ಮಹಾರಾಜರು ಆ ಕೂಡಲೇ ಉತ್ತರ ಬರೆದರು: ''ಶ್ರೀಮಾತೆಯವರ ಶ್ರೀಚರಣಗಳ ದರ್ಶನ ಮಾಡಬೇಕೆಂದು ನೀನು ಬಯಸಿದ್ದೀಯಾ. ಬಹಳ ಒಳ್ಳೆಯದು. ನೀನು ಅವರ ಬಳಿಗೆ ಹೋಗಿ ಹೀಗೆ ಹೇಳು, 'ಶಿವಾನಂದ ಸ್ವಾಮಿಗಳು ನಿಮ್ಮ ಶ್ರೀಚರಣಗಳ ದರ್ಶನ ಪಡೆಯಲು ನನ್ನನ್ನು ಕಳುಹಿಸಿಕೊಟ್ಟಿದ್ದಾರೆ. ನಿಮ್ಮ ದರ್ಶನ ಹಾಗೂ ಕೃಪೆ (ಮಂತ್ರದೀಕ್ಷೆ) ಯನ್ನು ಪಡೆಯಲು ಅಲ್ಲಿಂದ ನಾನು ಇಲ್ಲಿಗೆ ಬಂದಿದ್ದೇನೆ. ತಾಯಿ ನನ್ನ ಮೇಲೆ ಕೃಪೆ ತೋರಬೇಕು.' ಹೀಗೆ ನೀನು ಕೇಳಿಕೊಂಡರೆ ಅವರು ನಿನ್ನ ಮೇಲೆ ಕೃಪೆ ಮಾಡುವರು. ಅವರ ದಯೆಯ ದ್ವಾರವನ್ನು ತೆಗೆದುಬಿಟ್ಟಿದ್ದಾರೆ. ಅವರು ಯಾರನ್ನೂ ತಿರಸ್ಕರಿಸುವುದಿಲ್ಲ. ಆದಕಾರಣ ನಾನು ಪ್ರತ್ಯೇಕವಾಗಿ ಅವರಿಗೆ ಪತ್ರ ಬರೆಯುವ ಅಗತ್ಯವಿಲ್ಲ. ಈ ಪತ್ರವನ್ನು ಅವರ ಬಳಿ ಕುಳಿತು ಓದು; ಹೀಗೆ ಮಾಡಿದರೂ ಸಾಕಾಗಬಹುದು.'' ಮಹಾಪುರುಷ ಮಹಾರಾಜರ ಪತ್ರವನ್ನೋದಿ ನಾನು ಆನಂದಗೊಂಡೆ. ನನ್ನ ಅಂತರಂಗ ಆನಂದ ಹಾಗೂ ನಿರೀಕ್ಷೆಗಳಿಂದ ತುಂಬಿಹೋಯಿತು. ಆದರೆ, ನಾನು ಯಾವ ಕೆಲಸಕ್ಕಾಗಿ ಅಲ್ಲಿಗೆ ಬಂದಿದ್ದೆನೋ ಅದಕ್ಕೆ ಭಂಗವುಂಟು ಮಾಡಿ ಅಲ್ಲಿಂದ ಹೋಗುವುದು ಸಾಧ್ಯವಿಲ್ಲ. ಶ್ರೀಮಾತೆಯವರ ದರ್ಶನ ಹೊಂದುವ ಸುಯೋಗವನ್ನೇ ನಾನು ನಿರೀಕ್ಷಿಸತೊಡಗಿದೆ.

ಆ ಪತ್ರದೊಂದಿಗೆ ಮಹಾಪುರುಷ ಮಹಾರಾಜರು ಎರಡು ಅಡ್ಡಪಂಚೆಗಳನ್ನು ಕಳುಹಿಸಿಕೊಡಲು ಬರೆದಿದ್ದರು. ಅಲ್ಲಿನ ಅಂಗಡಿಯಿಂದ ಅವುಗಳನ್ನು ಕೊಂಡುಕೊಂಡು, ರಿಜಿಸ್ಟರ್ಡ್ ಅಂಚೆ ಮೂಲಕ ಅವರಿಗೆ ಅದನ್ನು ಕಳುಹಿಸಿಕೊಟ್ಟೆ. ಅಡ್ಡಪಂಚೆಗಳನ್ನು ಪಡೆದುಕೊಂಡ ಮಹಾಪುರುಷ ಮಹಾರಾಜರು ಉತ್ತರ ಬರೆದಿದ್ದರು: ''ನೀನು ಕಳುಹಿಸಿಕೊಟ್ಟ ಎರಡು ಅಡ್ಡಪಂಚೆಗಳು ಇಂದು ಬಂದು ತಲುಪಿದವು. ಶ್ರೀಮಾತೆಯವರ ಕೃಪೆ ಲಭಿಸುವುದು ಅತ್ಯಂತ

ಸೌಭಾಗ್ಯದ ಸಂಗತಿ. ನೀನು ಅವರ ಬಳಿಗೆ ಹೋಗಿ ಅವರ ಪಾದ ಪದ್ಮಗಳಲ್ಲಿ ತಲೆಬಾಗಿ ನಮಸ್ಕರಿಸಿ ಹೇಳು – 'ಅಮ್ಮಾ, ನನ್ನ ಮೇಲೆ ಕೃಪೆದೋರಿ' ಅಂತ. ಅನಂತರ ಅವರು ಏನನ್ನು ಹೇಳುತ್ತಾರೋ ಅದನ್ನು ನೀನು ಶಿರಸಾ ವಹಿಸಿ ಅನುಸರಿಸು. ಒಂದು ವೇಳೆ ಅವರು ದಯಪಾಲಿಸಿ ನಿನಗೆ ಮಂತ್ರದೀಕ್ಷೆಯನ್ನು ನೀಡಿದ್ದೇ ಆದರೆ, ನೀನು ಭಾಗ್ಯವಂತ ಎಂದೇ ತಿಳಿದುಕೋ. ಅವರು ನಮ್ಮೆಲ್ಲರ ತಾಯಿ. ಅವರು ಕೊಟ್ಟ ಮಂತ್ರವನ್ನು ಪಡೆದರೆ ನಿನ್ನ ಜೀವನ ಸಾರ್ಥಕ ವಾಗುವುದು. ಅದರಿಂದ ನನಗೂ ಆನಂದವಾಗುವುದೆಂದು ತಿಳಿ. ಅವರು ಶ್ರೀರಾಮಕೃಷ್ಣರ ಮಂತ್ರವನ್ನೇ ನಿನಗೆ ಕೊಡುತ್ತಾರೆ – ಅವರು ಎಲ್ಲರಿಗೂ ಅದನ್ನೇ ಕೊಡುತ್ತಾರೆ.''

ಅವರ ಪತ್ರವನ್ನು ಪಡೆದ ಮೇಲೆ ನನ್ನ ಮನಸ್ಸು ಶ್ರೀಮಾತೆ ಯವರ ದರ್ಶನ ಪಡೆಯಲು ಮತ್ತಷ್ಟು ವ್ಯಾಕುಲಗೊಂಡಿತು. ಭಗವಂತನನ್ನು ಕಾತರತೆಯಿಂದ ಪ್ರಾರ್ಥಿಸತೊಡಗಿದೆ; ಅಂತೆಯೇ ಆ ಸುಯೋಗವೂ ಬಂದೊದಗಿತು. ಕೆಲವು ದಿನಗಳ ಮಟ್ಟಿಗೆ ರಜೆ ಪಡೆದುಕೊಂಡು ಶ್ರೀಮಾತೆಯವರ ದರ್ಶನಕ್ಕಾಗಿ ಹೊರಟೆ.

ಬಾಂಕುರಾ ಆಶ್ರಮಕ್ಕೆ ನಡೆದು ಹೋದೆ; ಅಲ್ಲಿಂದ ಗರ್ಬೆಟಾ ವರೆಗೆ ರೈಲಿನಲ್ಲಿ ಪ್ರಯಾಣಿಸಿದೆ. ಅಲ್ಲಿನ ಆಶ್ರಮದಲ್ಲಿ ಆ ದಿನ ರಾತ್ರಿ ತಂಗಿದ್ದು, ಮರುದಿನ – ಭಾದ್ರಪದ ಮಾಸ ಪ್ರಥಮ ದಿನ ದಂದು ಬೆಳಗಿನ ಹೊತ್ತು ಪುಣ್ಯಪೀಠವಾದ ಜಯರಾಮಬಾಟಿ ಯತ್ತ ಹೊರಟೆ. ಬರಿಗಾಲಲ್ಲಿ , ಕೆಸರಿನಿಂದ ಒದ್ದೆಯಾಗಿದ್ದ ದಾರಿ ಯಲ್ಲಿ ನಡೆದೆ. ಸಣ್ಣಗೆ ಮಳೆಯಾಗುತ್ತಿತ್ತು ಬೇರೆ. ಸಾಯಂಕಾಲ ಸುಮಾರು ಐದರ ಹೊತ್ತಿಗೆ ಜಯರಾಮಬಾಟಿ ಗ್ರಾಮದ ಹೊರ ವಲಯವನ್ನು ತಲುಪುತ್ತಿದ್ದಂತೆ ನನ್ನೆದೆ ಒನಕೆ ಕುಟ್ಟುವಂತೆ ಬಡಿ ಯಲಾರಂಭಿಸಿತು. ದಾರಿಯ ಇಕ್ಕೆಲಗಳಲ್ಲಿದ್ದ ಸಣ್ಣ ಸಣ್ಣ ಮಣ್ಣಿನ ಗುಡಿಸಲುಗಳನ್ನು ದಾಟಿ, ಕೊನೆಗೆ ಶ್ರೀಮಾತೆಯವರ ಮನೆ ಬಾಗಿ ಲನ್ನು ತಲುಪಿದೆ. ನಾನು ಯಾವುದೇ ಪತ್ರವನ್ನು ಬರೆಯದೇ ಅಲ್ಲಿಗೆ ಹೋಗಿದ್ದರೂ ಶ್ರೀಮಾತೆಗೆ ಹೇಗೋ ನನ್ನ ಬರುವಿಕೆ ತಿಳಿದು ಹೋದಂತಿತ್ತು. ಸೇವಕ ಮಹಾರಾಜರಿಗೆ ನನ್ನ ಪರಿಚಯ ತಿಳಿಸಿ, ಶ್ರೀಮಾತೆಯವರ ದರ್ಶನಕ್ಕಾಗಿ ಪ್ರಾರ್ಥಿಸಿಕೊಂಡಾಗ, ಅವರು ಕೂಡಲೇ ನನ್ನನ್ನು ಅವರ ಮನೆಯೊಳಕ್ಕೆ ಕರೆದೊಯ್ದರು. ಆಗ ಶ್ರೀಮಾತೆ ಮನೆಯೊಳಗೆ ಬಾಗಿಲ ಬಳಿ ನಿಂತಿದ್ದರು. ಶ್ರೀಮಾತೆಯವ ರಿಗೆ ಪ್ರಣಾಮ ಮಾಡಿ ನಾನು ತಲೆಯೆತ್ತಿದಾಗ ಅವರು ಆವೇಗದಿಂದ ಭಾವಪೂರಿತರಾಗಿ, ''ಅಯ್ಯೋ, ಪಾಪ! ನನ್ನ ಮಗುವಿನ ಮುಖ ಒಣಗಿಹೋಗಿದೆ! ದಿನವಿಡೀ ಊಟಮಾಡಿಲ್ಲ. ಇವನಿಗೆ ಒಂದಿಷ್ಟು ತಿನ್ನಲು ಏನಾದರೂ ಕೊಡು'' ಎಂದರು. ನಾನು ಆಸೆಯಿಂದ ಮಹಾಪುರುಷ ಮಹಾರಾಜರು ಕಳುಹಿಸಿದ್ದ ಪತ್ರವನ್ನು ಓದಬೇಕೆ ನ್ನುವಷ್ಟರಲ್ಲಿ ಶ್ರೀಮಾತೆ, ''ಪತ್ರ ಆ ಮೇಲೆ ಓದಿ ಹೇಳುವಿಯಂತೆ. ಈಗ ಕೈಕಾಲು ಮುಖ ತೊಳೆದು ತಿಂಡಿ ಮಾಡು'' ಎಂದರು.

ಕೈಕಾಲು, ಮುಖ ತೊಳೆದ ನಂತರ ಸೇವಕ ಮಹಾರಾಜರು ನನ್ನನ್ನು ಪಕ್ಕದ ಕೋಣೆಗೆ ಕರೆದುಕೊಂಡು ಹೋದರು. ಹರಡಿದ ಆಸನದ ಮುಂದೆ ಒಂದು ತಟ್ಟೆಯಲ್ಲಿ ಕಡಲೆಪುರಿ, ಪಾಯಸ ಹಾಗೂ ಒಂದು ಲೋಟ ನೀರನ್ನಿಟ್ಟಿದ್ದರು. ನಾನು ತಲೆ ತಗ್ಗಿಸಿ ಕುಳಿತು, ಶ್ರೀಮಾತೆಯವರ ಮಾತುಗಳನ್ನೇ ಮನಸ್ಸಿನಲ್ಲಿ ತುಂಬಿ ಕೊಳ್ಳುತ್ತ ಎಲ್ಲವನ್ನೂ ತಿಂದು ಮುಗಿಸಿಬಿಟ್ಟೆ. ಅದೇನು ಅದ್ಭುತ! ನನ್ನ ಜೀವನದುದ್ದಕ್ಕೂ ಕಡಲೆಪುರಿ, ಪಾಯಸ ಇವನ್ನು ಅದೆಷ್ಟೋ ಬಾರಿ ಸವಿದಿದ್ದೇನೆ. ಆದರೆ ಎಂದಿಗೂ ಇಷ್ಟು ಸವಿಯಾಗಿರಲಿಲ್ಲ.

ಜಯರಾಮಬಾಟಿಯಲ್ಲಿ ಶ್ರೀಮಾತೆಯವರು ನಿಜಕ್ಕೂ ತಾಯಿ ಯಂತೆಯೇ ಕಂಡುಬಂದರು. ಸಾಮಾನ್ಯವಾದ ಬಟ್ಟೆಯನ್ನು ಉಟ್ಟುಕೊಂಡು ನನ್ನ ಆಗಮನವನ್ನೇ ನಿರೀಕ್ಷಿಸುತ್ತ ಎಷ್ಟೊಂದು ಪ್ರೀತಿ, ಅಕ್ಕರೆಗಳಿಂದ ತುಂಬಿದ ಮೂರ್ತಿಯಾಗಿ ಅವರು ಕಾಣಿಸಿ ಕೊಂಡಿದ್ದರು! ಸುಮಾರು ಹತ್ತು ತಿಂಗಳ ಹಿಂದೆ ಅವರನ್ನು ಬಾಗ್ ಬಜಾರಿನ 'ಉದ್ಬೋಧನ'ದಲ್ಲಿ ಕಂಡಾಗ ಅವರು ಅಷ್ಟೊಂದು ಆತ್ಮೀಯರಾಗಿ ಕಾಣಿಸಿಕೊಂಡಿರಲಿಲ್ಲ.

ಸ್ವಲ್ಪಹೊತ್ತಿನ ನಂತರ ನಾನು ಶ್ರೀಮಾತೆಯವರ ಬಳಿಗೆ ಹೋದೆ. ಅವರು ತಮ್ಮ ಕೋಣೆಯ ಹೊರಗಿನ ಜಗಲಿಯಲ್ಲಿ ಕಾಲುಚಾಚಿ ಕುಳಿತು ತರಕಾರಿ ಹೆಚ್ಚುತ್ತಿದ್ದರು. ನಾನು ಶ್ರೀಮಾತೆಯವರಿಗೆ ಪ್ರಣಾಮ ಮಾಡಿ, ಅವರ ಬಳಿ ಕುಳಿತು ಮಹಾಪುರುಷ ಮಹಾ ರಾಜರ ಪತ್ರವನ್ನು ಅವರಿಗೆ ಓದಿ ಹೇಳಿದೆ. ಅವರು 'ತಾರಕನ' (ಮಹಾಪುರುಷ ಮಹಾರಾಜರ) ವರ್ತಮಾನ ಕೇಳಿ ತಿಳಿದರು. ಅಷ್ಟೇ ಕಾಳಜಿಯಿಂದ ಗ್ರಾಮ ಪರಿಹಾರ ಕಾರ್ಯದ ಸುದ್ದಿಯನ್ನು ಕೇಳಿ ತಿಳಿದರು. ಅನಂತರ ಅವರು ಮಂತ್ರದೀಕ್ಷೆಯ ಬಗ್ಗೆ ಹೇಳಿ ದರು: ''ನಾಳೆ ಬಹಳ ಒಳ್ಳೆಯ ದಿನ ಮಗೂ; (ಬಹುಶಃ ಮರುದಿನ ಶ್ರೀಕೃಷ್ಣ ಜನ್ಮಾಷ್ಟಮಿಯಿದ್ದಿರಬೇಕು) ನಾಳೆಯೇ ನಿನಗೆ ಮಂತ್ರದೀಕ್ಷೆ ನೀಡುತ್ತೇನೆ. ಬೆಳಿಗ್ಗೆ ಏನನ್ನೂ ತಿನ್ನಬೇಡ. ಸ್ನಾನ ಮಾಡಿ ಕಾದು ನಿಲ್ಲು. ಸಮಯ ಬಂದಾಗ ನಾನು ಕರೆಯುತ್ತೇನೆ'' ಎಂದರು. ಅನಂತರ ಅವರು ಪಕ್ಕದ ಕೋಣೆಯಲ್ಲಿ (ಅವರ ಪೂಜಾಗೃಹ) ಪ್ರಣಾಮ ಮಾಡಲು ಹೇಳಿದರು.

ಬಾಂಕುರದಲ್ಲಿದ್ದ ಡಾಕ್ಟರ್ – ಸ್ವಾಮಿ ವೈಕುಂಠ ಮಹಾರಾಜರು ಶ್ರೀಮಾತೆಯವರ ವಾತದ ಕಾಯಿಲೆಗೋಸ್ಕರ ಹೋಮಿಯೋಪಥಿ ಔಷಧಿಯನ್ನು ನನ್ನ ಮೂಲಕ ಕೊಟ್ಟು ಕಳುಹಿಸಿದ್ದರು. ಅದನ್ನು ನಾನು ಶ್ರೀಮಾತೆಯವರ ಬಳಿಗೆ ತೆಗೆದುಕೊಂಡು ಹೋಗಿದ್ದೆ. ಅದನ್ನು ಶ್ರೀಮಾತೆಗೆ ಕೊಟ್ಟಾಗ ಅವರು ಉತ್ಕಂಠೆಯಿಂದ ಹೇಳಿ ದರು: ''ವೈಕುಂಠ ಔಷಧವನ್ನು ಕಳುಹಿಸಿದ್ದಾನೆಯೆ? ಕೊಡು ಮಗೂ, ಕೊಡು. ವೈಕುಂಠನ ಔಷಧಿಯಿಂದ ಕಾಯಿಲೆ ವಾಸಿ ಯಾಗುತ್ತದೆ. ನೋಡು, ನನ್ನ ದೇಹವಿಡೀ ಹೇಗಾಗಿಬಿಟ್ಟಿದೆ! ವಾತದ ನೋವಿನಿಂದ ಸತ್ತೇ ಹೋಗಿಬಿಟ್ಟೆ!'' ಎಂದು ಹೇಳುತ್ತಾ ಶ್ರೀಮಾತೆ ತಮ್ಮ ದೇಹದ ಮೇಲೆ ಉಂಟಾಗಿದ್ದ ವಾತವನ್ನು ತೋರಿಸಿದರು. ಅವರ ಕಷ್ಟವನ್ನು ನೋಡಿ ನನ್ನ ಕಣ್ಣುಗಳಲ್ಲಿ ನೀರಿಳಿಯಿತು.

ಶ್ರೀಮಾತೆ ಔಷಧವನ್ನು ಒಂದು ಬದಿಯಲ್ಲಿಟ್ಟರು. ಬಳಿಕ ಅವರು ತುಂಬ ಆತ್ಮೀಯವಾಗಿ, ಅತ್ಯಂತ ಕಾಳಜಿಯಿಂದ ಬಾಂಕು

ರಾದ ವೈಕುಂಠ ಮಹಾರಾಜರೇ ಮೊದಲಾದವರ ಕ್ಷೇಮ ಸಮಾಚಾರ ಕೇಳಿ ತಿಳಿದರು. ಇನ್ನು ಅದೆಷ್ಟೋ ಮಾತುಕತೆಗಳು!

ಕ್ರಮೇಣ ಸಂಜೆ ಹೆಪ್ಪುಗಟ್ಟಿತು. ಕೋಣೆಗಳಲ್ಲೆಲ್ಲ ದೀಪ ಬೆಳಗಿತು. ಶ್ರೀಮಾತೆಯವರ ಪೂಜಾಗೃಹದಲ್ಲೂ ದೀಪ, ಧೂಪಗಳನ್ನಿಟ್ಟರು. ನಾನು ತಂಗಿದ್ದ ಹೊರಗಿನ ಕೋಣೆಗೆ ಮರಳಿದೆ.

* * *

ಅಂದು ಜಯರಾಮಬಾಟಿಯಲ್ಲಿ ಬೇರೆ ಯಾವ ಭಕ್ತರೂ ಇರಲಿಲ್ಲ. ರಾತ್ರಿ ಹೊತ್ತು ಶ್ರೀಮಾತೆ ತುಸು ದೂರದಲ್ಲಿ ನಿಂತು ನಾನು ಊಟ ಮಾಡುತ್ತಿದ್ದುದನ್ನು ನೋಡುತ್ತಿದ್ದರು. ನಾನು ಇಡೀ ದಿನ ಊಟ ಮಾಡದೆ ಇದುದ್ದರಿಂದ, ತುಂಬ ಅಕ್ಕರೆಯಿಂದ ನನಗೆ ಬಡಿಸಿದರು. ಮರುದಿನ ಬೆಳಗಿನ ನಿರೀಕ್ಷೆಯಲ್ಲೇ ರಾತ್ರಿಯೆಲ್ಲ ನಿದ್ದೆಯಿಲ್ಲದೆ ಕಳೆದೆ. ಬೆಳಿಗ್ಗೆ ನಾನು ಕೆರೆಯಲ್ಲಿ ಸ್ನಾನ ಮಾಡಿ, ಶ್ರೀಮಾತೆಯವರ ಕರೆಯನ್ನೇ ನಿರೀಕ್ಷಿಸುತ್ತ ಕುಳಿತಿದ್ದೆ. ದೀಕ್ಷೆಗಾಗಿ ಏನೇನು ವಸ್ತುಗಳು ಅಗತ್ಯವೆಂದು ನನಗೊಂದೂ ಗೊತ್ತಿರಲಿಲ್ಲ , ಯಾರನ್ನೂ ಕೇಳಿರಲಿಲ್ಲ. ನನ್ನಲ್ಲಿ ಹಣವೂ ಇರಲಿಲ್ಲ. ಸುಮಾರು ಎಂಟು ಗಂಟೆಯ ಹೊತ್ತಿಗೆ ಶ್ರೀಮಾತೆಯವರ ಸೇವಕ ಮಹಾರಾಜರು ನನ್ನನ್ನು ಕರೆದು, ಶ್ರೀಮಾತೆಯವರ ಪೂಜಾಗೃಹಕ್ಕೆ ಕರೆದುಕೊಂಡು ಹೋಗಿ, ನನ್ನ ಒಳಗೆ ಬಿಟ್ಟು ಬಾಗಿಲು ಸರಿಸಿ ಹೊರಟು ಹೋದರು. ಅವರ ಪಕ್ಕದಲ್ಲಿ ಇನ್ನೊಂದು ಆಸನವಿತ್ತು. ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿ, ಆ ಇನ್ನೊಂದು ಆಸನದಲ್ಲಿ ಕುಳಿತುಕೊಳ್ಳುವಂತೆ ಶ್ರೀಮಾತೆ ನನಗೆ ಹೇಳಿದರು. ನಾನು ಕುಳಿತ ನಂತರ ನನ್ನ ಕೈಗೆ ಒಂದಿಷ್ಟು ಗಂಗಾಜಲ ಚಿಮುಕಿಸಿ, ನನ್ನ ದೇಹದ ಮೇಲೆಲ್ಲ ಗಂಗಾಜಲವನ್ನು ಪ್ರೋಕ್ಷಿಸಿದರು. ಅನಂತರ ಅವರು ನನ್ನ ತಲೆ ಮತ್ತು ದೇಹವನ್ನು ಸ್ಪರ್ಶಿಸಿದರು. ಶ್ರೀಮಾತೆಯವರ ಸ್ಪರ್ಶದಿಂದ ನನಗೆ ಅನಿರ್ವಚನೀಯ ಆನಂದ ತುಂಬಿಕೊಳ್ಳತೊಡಗಿತು. ಶ್ರೀಮಾತೆ ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಕುಳಿತು ನನ್ನನ್ನು ಕೇಳಿದರು: ''ನಿನಗೆ ಶ್ರೀರಾಮಕೃಷ್ಣರು ಇಷ್ಟರಾದರೆ?'' ನಾನು ಹೌದೆಂದಾಗ ಅವರು ಮೂರು ಬಾರಿ ಒಂದು ಮಂತ್ರವನ್ನು ಉಚ್ಚರಿಸಿ, ನಾನು ಅದನ್ನು ಅನುಸರಿಸಿ ಉಚ್ಚರಿಸುವಂತೆ ಹೇಳಿದರು. ಅವರು ಇದ್ದಕ್ಕಿದ್ದಂತೆ ಪಕ್ಕದ ಗೋಡೆಯತ್ತ ಕೈತೋರಿಸಿ, ''ನೋಡು, ಇದೇ ನಿನ್ನ ಇಷ್ಟದೇವತೆ'' ಎಂದರು. ಆ ಕೂಡಲೇ ಕಣ್ಣುಕೋರೈಸುವ ಉಜ್ಜಲ ಬೆಳಕಿನಿಂದ ಆ ದಿಕ್ಕು ಬೆಳಗತೊಡಗಿತು; ಅಲ್ಲಿ ಒಂದು ದೇವೀ ಮೂರ್ತಿ ಬೆಳಗುತ್ತಾ ಮೂಡಿಬಂತು – ಅದು ಜೀವಂತವಾದ ಹಾಗೂ ಜ್ಯೋತಿರ್ಮಯಿಯಾದ ಮೂರ್ತಿಯಾಗಿತ್ತು! ನನ್ನೆಡೆಗೆ ಅದು ಪ್ರೀತಿಯಿಂದ ನೋಡುತ್ತಿತ್ತು. ಚಕಿತನಾದ ನನಗೆ ಏನೋ ಆನಂದವಾಯಿತು. ನಾನು ವಿಹ್ವಲನಾಗಿ ದೇಹಪ್ರಜ್ಞೆ ಕಳೆದುಕೊಂಡೆ. ಆದರೆ ಅದು ಕೆಲವು ಕ್ಷಣ ಮಾತ್ರ. ಆಗ ಶ್ರೀಮಾತೆಯವರು ಕೂಡ ಬೇರೆಯೇ ಆಗಿ ಕಂಡುಬಂದರು. ಸ್ವಲ್ಪ ಸಮಯದಲ್ಲಿ ಶ್ರೀಮಾತೆ ಪ್ರೀತಿಯಿಂದ ಕೇಳಿದರು, ''ಮಗೂ, ಹೆದರಿಬಿಟ್ಟೆಯಾ?'' ನಾನು ತಲೆತಗ್ಗಿಸಿ ಸುಮ್ಮನೆ ಕುಳಿತಿದ್ದೆ. ಉತ್ತರಿಸಲು ನನ್ನಲ್ಲಿ ಚೈತನ್ಯವೇ ಇರಲಿಲ್ಲ. ಅನಂತರ ಶ್ರೀಮಾತೆ ನನ್ನ ಎಡಗೈಯನ್ನು ಹಿಡಿದು ಪ್ರತ್ಯೇಕ ಬೆರಳುಗಳನ್ನು ಸ್ಪರ್ಶಿಸಿ, ಜಪ ಮಾಡುವ ಕ್ರಮವನ್ನು ತೋರಿಸಿಕೊಟ್ಟರು! ಶ್ರೀಮಾತೆ ಮಾತನಾಡುತ್ತಿದ್ದರು; ಆದರೆ ನನಗೆ ಏನೋ ಒಂದು ರೀತಿ ಆಗಿಬಿಟ್ಟಿತು. ಶ್ರೀಮಾತೆ ಪದೇ ಪದೇ ಕರಸ್ಪರ್ಶ ಮಾಡಿಸಿ, ಜಪ ಮಾಡುವ ಕ್ರಮವನ್ನು ತೋರಿಸಿಕೊಡುತ್ತಲೇ ಇದ್ದಾರೆ; ನಾನು ಅವರೊಂದಿಗೆ ಮಂತ್ರೋಚ್ಚಾರಣೆ ಮಾಡಲು ಹೇಳಿದರು. ನಾನೂ ಅಂತೆಯೇ ಮಾಡಿದೆ. ಅನಂತರ ಶ್ರೀಮಾತೆ, ಶ್ರೀರಾಮಕೃಷ್ಣರ ಚಿತ್ರಪಟವನ್ನು ತೋರಿಸಿ, ''ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡು. ಅವರೇ ನಿನ್ನ ಇಷ್ಟದೇವತೆ; ಅವರೇ ನಿನ್ನ ಗುರು. ನಿನ್ನ ಇಹ–ಪರಗಳೆರಡರ ಸರ್ವಸ್ವವೂ ಅವರೇ. ಶ್ರೀರಾಮಕೃಷ್ಣರೋ ಸರ್ವದೇವದೇವೀ ಸ್ವರೂಪರು'' ಎಂದರು. ನಾನು ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿ, ಅನಂತರ ಶ್ರೀಮಾತೆಗೂ ಪ್ರಣಾಮ ಮಾಡಿದೆ. ಅನಂತರ ಅವರು ಎಷ್ಟು ಜಪ ಮಾಡಬೇಕು ಎಂದು ಹೇಳಿ, ಧ್ಯಾನವನ್ನು ಕುರಿತು ನಾನಾ ಉಪದೇಶಗಳನ್ನು ನೀಡಿದರು. ಶ್ರೀಮಾತೆ ಯಾರು, ಎಂಥವರು ಎಂದು ಆಗ ನನಗೆ ಅರ್ಥವಾಗಿರಲಿಲ್ಲ; ಈಗಲೂ ಅರ್ಥವಾಗಲಿಲ್ಲ. ಆದರೆ ಆಗ ತಿಳಿದಿದ್ದೆ – ಅವರು ಕೇವಲ ತಮ್ಮ ಇಚ್ಛಾಶಕ್ತಿಯಿಂದ ಮಾತ್ರವೇ ಭಗವಂತನ ದರ್ಶನ ಮಾಡಿಸಿಕೊಡಬಲ್ಲರು ಎಂದು.

ಶ್ರೀಮಾತೆ ಪೂಜೆ ಮಾಡುವ ಆಸನದ ಪಕ್ಕದಲ್ಲಿ ಎರಡು ಹಣ್ಣುಗಳಿದ್ದವು. ಅವುಗಳನ್ನು ನನ್ನ ಕೈಗಿತ್ತು ಅವರೆಂದರು, ''ಈ ಹಣ್ಣುಗಳನ್ನು ನನ್ನ ಕೈಗೆ ಕೊಡು.'' ನಾನು ಹಾಗೆಯೇ ಮಾಡಿದೆ. ಅದೇ ಗುರುದಕ್ಷಿಣೆಯಿರಬೇಕು ಅಂದುಕೊಂಡೆ. ನಾನು ಹಣ್ಣನ್ನಾಗಲೀ, ಹಣವನ್ನಾಗಲೀ ತೆಗೆದುಕೊಂಡು ಹೋಗಿರಲಿಲ್ಲ. ನನ್ನ ದೇಹ ಪೂರ್ತಿ ನಡುಗುತ್ತಿತ್ತು.

ನಾನು ಮತ್ತೊಮ್ಮೆ ಶ್ರೀಮಾತೆಯವರಿಗೆ ಪ್ರಣಾಮ ಮಾಡಿದೆ. ಅವರಿಗೆ ಅಷ್ಟೊಂದು ಸನಿಹದಲ್ಲಿ ಇದ್ದಾಗ ನನಗೆ ತುಂಬ ಆನಂದವುಂಟಾಗಿತ್ತು, ತುಂಬ ಹಿತವೆನಿಸುತ್ತಿತ್ತು. ಶ್ರೀಮಾತೆ ಸ್ನೇಹಪೂರ್ಣವಾಗಿ ನುಡಿದರು: ''ಈಗ ನೀನು ನಿನ್ನ ಕೋಣೆಗೆ ಹೋಗಿ, ನಿನಗೆ ಹೇಗೆ ತೋರಿಸಿಕೊಟ್ಟಿದ್ದೇನೋ ಅದೇ ರೀತಿ ಒಂದಿಷ್ಟು ಜಪ ಮಾಡು. ಅದಾದ ಮೇಲೆ ತಿಂಡಿ ತಿನ್ನುವಿಯಂತೆ.'' *(ಮುಂದಿನ ಸಂಚಿಕೆಗೆ)*

**ಒಬ್ಬರ ಮನಸ್ಸಿಗೆ ನೋವಾಗುವಂತೆ ಮಾತನಾಡಬಹುದೆ? ಹೇಳುವ ಮಾತು ಸತ್ಯವೇ ಆಗಿದ್ದಿರಬಹುದು; ಆದರೆ ಅದು ಅಪ್ರಿಯವಾಗಿದ್ದರೆ ಹೇಳಬಾರದು. ಕೊನೆಗೆ ಅದೇ ಸ್ವಭಾವವಾಗಿ ಬಿಡುವುದು. ಜನ ಶಿಷ್ಟಾಚಾರ ಬಿಟ್ಟುಬಿಟ್ಟರೆ ನಾಲಗೆ ಏನನ್ನಾದರೂ ಆಡಲು ಹೇಸುವುದಿಲ್ಲ.**

*–ಶ್ರೀಮಾತೆ ಶಾರದಾದೇವಿ*

# ಯೋಗವಾಸಿಷ್ಠದ ಕಥೆಗಳು

ಸ್ವಾಮಿ ವೀರೇಶಾನಂದ

ಕಥಾಗುಚ್ಛ – ೯



## ರಾಜಾ ಜನಕನ ಕಥೆ

ವಸಿಷ್ಠರು ರಾಮಚಂದ್ರನಿಗೆ ತಮ್ಮ ಬೋಧನೆಯನ್ನು ಮುಂದುವರಿಸುತ್ತಿದ್ದಾರೆ: ''ರಾಮ, ಜೀವಿಗಳ ಮೋಕ್ಷಕ್ಕೆ ಎರಡು ಮಾರ್ಗಗಳು ಸೂಕ್ತ. ಒಂದು ಗುರುವಿನ ಉಪದೇಶವನ್ನು ಚಾಚೂ ತಪ್ಪದೆ ಪರಿಪಾಲಿಸುವುದು. ಇದರಿಂದ ಈ ಜನ್ಮದಲ್ಲಿಯೇ ಮುಕ್ತಿ ದೊರಕಲು ಸಾಧ್ಯ. ಎರಡನೆಯದು, ಸ್ವಯಂ-ಅನುಭೂತಿ. ಒಮ್ಮೊಮ್ಮೆ ಆತ್ಮಜ್ಞಾನವು ತನಗೆ ತಾನೇ ಸ್ಫುರಿಸುತ್ತದೆ. ಅಂಥವನಿಗೆ ಅಂಗೈಯಲ್ಲಿನ ನೆಲ್ಲಿಕಾಯಿಯ ರೀತಿಯಲ್ಲಿ ಮೋಕ್ಷವು ಸುಲಭವಾಗಿ ಲಭಿಸುತ್ತದೆ. ಓ ರಾಮ, ಜನಕ ಮಹಾರಾಜನಿಗೆ ಈ ಬಗೆಯಲ್ಲಿ ಬ್ರಹ್ಮಜ್ಞಾನ ಉಂಟಾಗಿತ್ತು. ಆ ಕಥೆಯನ್ನು ಹೇಳುತ್ತೇನೆ, ಕೇಳು:

ವಿದೇಹ ಎನ್ನುವ ರಾಜ್ಯವೊಂದಿತ್ತು. ಈ ರಾಜ್ಯವನ್ನು ಸದ್ಗುಣಿಯಾದ ಜನಕ ಎಂಬ ರಾಜನು ಆಳುತ್ತಿದ್ದನು. ಅವನು ಧನವಂತ, ಕೊಡುಗೈ ದಾನಿ, ಉದಾತ್ತ ವ್ಯಕ್ತಿ. ತನ್ನ ಪ್ರಜೆಗಳನ್ನು ವಿಷ್ಣುವಿನಂತೆ ಪರಿಪಾಲಿಸುತ್ತಿದ್ದನು. ಅನೇಕ ಉತ್ತಮಗುಣಗಳನ್ನು ಹೊಂದಿ ಸರ್ವರಿಗೂ ಪೂಜನೀಯನಾಗಿದ್ದನು.

ಅದೊಂದು ವಸಂತಕಾಲದ ಸುಂದರ ಬೆಳಗು. ರಾಜನು ರಾಜೋದ್ಯಾನವನ್ನು ಹೊಕ್ಕಿದ್ದಾನೆ. ಮನದಣಿಯೆ ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುತ್ತಿದ್ದಾನೆ. ಪುಷ್ಪಗಳ ಸುಗಂಧ ವಾತಾವರಣವನ್ನು ಮಾದಕಗೊಳಿಸಿದೆ. ಹಕ್ಕಿಗಳ ಕಲರವ ಮನಸ್ಸನ್ನು ಉನ್ಮಾದಗೊಳಿಸಿದೆ. ಜನಕನಿಗೆ ಏಕಾಂತ ಬೇಕೆನ್ನಿಸಿತು. ತನ್ನ ಜೊತೆಯಲ್ಲಿದ್ದ ಬಂಟರನ್ನೂ ಮಂತ್ರಿಗಳನ್ನೂ ಅಲ್ಲೇ ನಿಂತಿರಲು ಹೇಳಿ, ಅವನೊಬ್ಬನೇ ಮುಂದೆ ನಡೆದ.

ಒಬ್ಬನೇ ಸಾಗುತ್ತಿದ್ದ ಜನಕರಾಜನಿಗೆ ದೈವವಶವೋ ಎಂಬಂತೆ ಸಿದ್ಧರ ಸುಮಧುರ ಗಾನ ಕೇಳಿಬಂತು; ದಿವ್ಯವಾಣಿಯ ಉಪದೇಶವಾಯಿತು.

ಮೊದಲನೆಯ ಸಿದ್ಧ ಹೀಗೆ ಹಾಡುತ್ತಿದ್ದನು :

ಜ್ಞಾನಿಯೂ ಜ್ಞಾನವೂ ಎಲ್ಲವೂ ಒಂದೇ
ಜೀವವೂ ಪರಮಾತ್ಮವೂ ಎಲ್ಲವೂ ಒಂದೇ
ಜೀವನು ಪರಮಾತ್ಮನಲಿ ವಿಲೀನವಾಗುವನಲ್ಲ
ಅದನೇ ಆತ್ಮಜ್ಞಾನವೆಂದು ಬಣ್ಣಿಸುವರು ತಿಳಿದವರೆಲ್ಲ

ಎರಡನೆಯ ಸಿದ್ಧನು ಹೀಗೆ ಹಾಡಿದನು:

ಮನಸ್ಸಿನ ವಾಸನೆಗಳು ಮುಕ್ತಿಗೆ ಬಾಧಕಗಳು
ನಿರ್ಮೂಲಗೊಳಿಸಿರಿ ಅವುಗಳನ್ನು
ಅದಕಾಗಿ ಧ್ಯಾನಿಸಿರಿ ಸಂತತವು ಆತ್ಮಸ್ವರೂಪವನ್ನು
ಜ್ಯೋತಿಗಳ ಜ್ಯೋತಿ, ನಿರ್ಗುಣ ಬ್ರಹ್ಮಸ್ವರೂಪವನ್ನು

ಮೂರನೆಯ ಸಿದ್ಧನು ಹೀಗೆ ಹಾಡುತ್ತಿದ್ದನು :

ಅನವರತ ನಡೆಯುತಿರಲಿ, ದಿವ್ಯಜ್ಯೋತಿಯ ಧ್ಯಾನ
ಸರ್ವವ್ಯಾಪಿಯ ಧ್ಯಾನ;
ಎಲ್ಲವನೂ ಬೆಳಗುವ ಪರಂಜ್ಯೋತಿಯ ಧ್ಯಾನ
ಇರವು ಇಲ್ಲದವುಗಳನ್ನೆಲ್ಲವನು ವ್ಯಾಪಿಸಿದೆ
ಸತ್ತು ಅಸತ್ತುಗಳನ್ನೆಲ್ಲವನು ಮೀರಿಸಿದೆ
ನಡೆಯುತಿರಲಿ ಸತತ ಆ ಪರಮಾತ್ಮ ಧ್ಯಾನ

ನಾಲ್ಕನೆಯ ಸಿದ್ಧನು ಹೀಗೆ ಹಾಡುತ್ತಿದ್ದನು:

ಸ್ವಪ್ರಕಾಶಕ ಆತ್ಮ ಯಾವ ರೂಪದ್ದು?
ಪ್ರತಿಯೊಂದು ಜೀವಿಯೂ
'ನಾನು' 'ನಾನು' ಎಂದು ಕರೆಯುವಂಥದ್ದು
'ಅ' ಕಾರದಿಂದ ಪ್ರಾರಂಭಿಸುವಂಥದ್ದು;
'ಹ'ಕಾರದೊಡನೆ ಸೇರಿಕೊಂಡದ್ದು
'ಮ' ಕಾರದಲ್ಲಿ ಅಂತ್ಯಗೊಳ್ಳುವುದು;
ಅದೇ 'ಅಹಂ' ಎಂದುಕೊಂಡದ್ದು
ಪ್ರತಿಯೊಂದು ಉಸಿರೂ 'ಸೋಽಹಂ', 'ಸೋಽಹಂ'
–'ಅದೇ ನಾನು', 'ಅದೇ ನಾನು'
ಅದೇ ಬ್ರಹ್ಮ, ಅದೇ ಆತ್ಮ, ಬೇರೆ ಇನ್ನೇನು

ಇನ್ನು ಕೆಲವರು ಸಿದ್ಧರು ಹೀಗೆ ಹಾಡುತ್ತಿದ್ದರು:

ನಿತ್ಯ ಸತ್ಯವ ನಾವು ಕೊಂಡಾಡುತಿಹೆವು
ಅದೆ ಎಲ್ಲ, ನಾವೆಲ್ಲ, ನೀವೆಲ್ಲ, ಜಗವೆಲ್ಲ
ಎಲ್ಲವೂ ಎಲ್ಲಿಂದ ಸ್ಫುರಣವಾಗಿದೆಯೋ
ಎಲ್ಲವೂ ಎಲ್ಲಿ ಜೀವನ ನಡೆಸುತಿಹುದೋ
ಎಲ್ಲವೂ ಮುಂದೊಮ್ಮೆ ಎಲ್ಲಿ ಲೀನವಾಗುವುದೋ
ಆ ನಿತ್ಯ ಸತ್ಯವೇ ದೈವ, ಆತ್ಮರೂಪವದೋ !

ಮತ್ತೂ ಕೆಲವರು ಸಿದ್ಧರು ಹೀಗೆ ಹಾಡುತ್ತಿದ್ದಾರೆ:

ಕೌಸ್ತುಭದ ಮಣಿ ಇಹುದು ನಿಮ್ಮ ಕೈಯಲ್ಲೇ
ಮರಳು ಶಂಖಗಳ ಹುಡುಕುವೆ ನೀ ಏಕೆ ಅಣ್ಣಾ?
ಹೃದಯದಲೆ ಪರಮಾತ್ಮನ ಹುದುಗಿಸಿಕೊಂಡಿರುವೆ
ಅತ್ತಿತ್ತ ಹುಡುಕುತಿಹೆ ಅವನ, ಕಾಣದವನನ್ನ.

ಹೀಗೆ ಸಿದ್ಧರು ಹಾಡುತ್ತಿದ್ದ ಹಾಡುಗಳನ್ನು ಕೇಳುತ್ತಲೇ ಜನಕ ಉದ್ಯಾನವನದ ನಿರ್ಜನ ಪಥಗಳಲ್ಲಿ ನಡೆಯುತ್ತಲಿದ್ದ. ಅವನ ಮನಸ್ಸು ಅವುಗಳಲ್ಲಿಯೇ ಮಗ್ನವಾಗಿ ಹೋಗಿತ್ತು. ಅವುಗಳ ಉಪದೇಶ ಬುದ್ಧಿಗೆ ನಾಟಿತ್ತು. ಹಟಾತ್ತನೆ ರಾಜ ದಢದಢನೆ ಅರಮನೆಯತ್ತ ದಾಪುಗಾಲು ಹಾಕಿದ. ತನ್ನ ಆವಾಸಸ್ಥಾನವನ್ನು ಹೊಕ್ಕು ಏಕಾಂತ ತಾಳಿದ.

ಸಿದ್ಧರ ಬೋಧನೆ ಜನಕನ ಮನಸ್ಸಿನಲ್ಲಿ ಪರಮ ವೈರಾಗ್ಯವನ್ನು ಉಂಟುಮಾಡಿತ್ತು. ಅವನ ಮನಸ್ಸಿನಲ್ಲಿ ಈ ಬಗೆಯ ವಿಚಾರ ನಡೆದಿತ್ತು:

'ಆಹಾ! ಈ ಜಗತ್ತಿನಲ್ಲಿ ಏನಾದರೂ ಸತ್ವ ಇದೆಯೆ? ಇಲ್ಲಿ ಸುಖವೂ ಇಲ್ಲ , ಸತ್ಯವೂ ಇಲ್ಲ! ಇದನ್ನು ನಾನು ಹೇಗೆ ತಾನೇ ನೆಚ್ಚಿಕೊಂಡಿರಲಿ? ಹೀಗಿದ್ದರೂ ಅದೇಕೆ ನನ್ನ ಮನಸ್ಸು ಈ ಜಗತ್ತಿನೆಡೆಗೆ ಇಷ್ಟೊಂದು ಮೋಹಿತವಾಗಿದೆ? ನನ್ನಂತರಂಗ ದಲ್ಲಿಯೇ ಅಗಣಿತ ಸಂಪತ್ತನ್ನು ಅಡಗಿಸಿಟ್ಟುಕೊಂಡು ದರಿದ್ರ ನಂತೆ, ನೋವು ದುಃಖಗಳಿಂದ ನರಳುತ್ತಿರುವೆನಲ್ಲಾ?

'ನನಗೆ ಇರುವ ಆಯುಸ್ಸಾದರೂ ಎಷ್ಟು ಕಾಲದ್ದು? ಹೆಚ್ಚೆಂದರೆ ನೂರು ವರ್ಷ. ಅನಂತಕ್ಕೆ ಹೋಲಿಸಿದರೆ ಇದು ಬರೀ ಅಣು ಮಾತ್ರವಲ್ಲವೇ? ಹಾಗಿದ್ದರೂ ಈ ನಶ್ವರ ಬಾಳನ್ನೇ ಬಹು ದೊಡ್ಡದೆಂದು ಎಣಿಸಿದ್ದೆನಲ್ಲ! ನನ್ನ ರಾಜ್ಯವಾದರೋ ಅಗಣಿತ ವಿಶ್ವಗಳಿಗೆ ಹೋಲಿಸಿದರೆ, ಒಂದು ಕಣಮಾತ್ರವೂ ಆಗದು! ಇಂಥ ರಾಜ್ಯದ ಮೇಲೆ ನನಗದೆಷ್ಟು ಮಮಕಾರ! ಈ ರಾಜ್ಯದ ಅಧಿಪತಿ ಯೆಂದು ಅದೆಷ್ಟು ಅಹಂಕಾರ! ನಾನು ನನ್ನ ಆಸೆಗಳಿಗೆ ದಾಸನಾಗಿ ಹೋಗಿದ್ದೇನೆ; ಇಂದ್ರಿಯಗಳ ಸೇವಕನಾಗಿ ಹೋಗಿದ್ದೇನೆ. ನನ್ನ ರಾಜ್ಯಾಡಳಿತದ ಅವಧಿಯೋ ಅತ್ಯಲ್ಪಕಾಲದ್ದು. ಆದರೂ ಬಹು ಕಾಲ ಆಳಬೇಕೆಂಬ ಕಾತರತೆ ನನಗೆ! ಅದರಲ್ಲೇ ನನ್ನ ಸುರಕ್ಷತೆ ಯನ್ನು ಕಾಣುತ್ತೇನೆ, ನಾನು. ಈ ಭುವಿಯ ಬಾಳೆಂಬುದು ಕ್ಷಣ ಮಾತ್ರದ್ದು. ಆದರೂ ಮೂರ್ಖನಂತೆ ಅದರ ಮೇಲೆಯೇ ಅಂಟಿ ಕೊಂಡಿದ್ದೇನೆ! ಯಾವುದು ನಿಜವಾಗಿಯೂ ಅತಿ ದೂರದ್ದೋ ಅಂಥ ವಿಷಯ ವಸ್ತುಗಳು ಸಮೀಪವೆಂಬಂತೆ ನನಗೆ ತೋರಿಬರು ತ್ತಿವೆ. ಯಾವುದು ಬಹು ಹತ್ತಿರದ್ದೋ ಅಂಥ ಆತ್ಮವು ನನಗೆ ಇನ್ನೂ ಬಹುದೂರದ ವಸ್ತುವಂತೆ ಕಂಡುಬರುತ್ತಿದೆ! ಇದೆಂಥ ವಿಪ ರ್ಯಾಸ! ಇದೆಲ್ಲವೂ ನನ್ನ ಅಜ್ಞಾನದ ಫಲವೇ ಸರಿ! ಅವಿದ್ಯೆಯ ಗುರುತೇ ಸರಿ! ಇದನ್ನು ನಾನು ಕಿತ್ತೊಗೆಯಬೇಕು! ಸತ್ಯವಸ್ತುವಾದ ನನ್ನಾತ್ಮವನ್ನು ಅರಿತುಕೊಳ್ಳಬೇಕು.

'ಹಾಗೆ ನೋಡಿದರೆ, ಎಲ್ಲವೂ ನಾಶವಾಗುವಂಥವು. ಯಾವುದೂ ಶಾಶ್ವತವಲ್ಲ. ಇವಾವುದರಿಂದಲೂ ಏನೂ ಪ್ರಯೋ ಜನವಿಲ್ಲ. ಮಹಾಮಹಿಮರೆನ್ನಿಸಿಕೊಂಡವರೂ, ನೀಚಾತಿನೀಚ ರಾಗಿ ಹೋಗುತ್ತಾರಲ್ಲವೆ! ನನ್ನಾತ್ಮವನ್ನು ಎಂದು ತಾನೇ ಈ ಭ್ರಾಂತಿಯು ಆವರಿಸಿತು? ಭಯಂಕರ ಆಪತ್ತಿನಲ್ಲಿ ಸಿಲುಕಿ ದುಃಖ ದೌರ್ಮನಸ್ಯಗಳಲ್ಲಿ ಮುಳುಗಿರುವ ನನಗೆ ಈ ರಾಜ್ಯಭೋಗ ದಿಂದಾಗಲಿ, ಸಂಪತ್ತಿನಿಂದಾಗಲಿ – ಏನು ತಾನೇ ಪ್ರಯೋಜನ? ನನ್ನ ಸಂಪತ್ತೆಂಬುದು ಬರಿಯ ನೀರಿನ ಗುಳ್ಳೆ! ಇದೊಂದು ನನ್ನ ಮುಂದಿರುವ ಕಣ್ಕಟ್ಟು ಮಾತ್ರ. ಹಿಂದೆ ಇದ್ದ ಅನೇಕಾನೇಕ ರಾಜೇಂದ್ರರು, ದೇವೇಂದ್ರರು – ಎಲ್ಲರೂ ನಶಿಸಿಹೋದರು; ಕಾಲವೆಂಬ ಅನಂತ ಸಾಗರವು ಅವರನ್ನು ಕಬಳಿಸಿಬಿಟ್ಟಿತು. ದುರ ದೃಷ್ಟವೆಂಬ ರಕ್ಕಸನ ದವಡೆಗೆ ಅವರೆಲ್ಲರೂ ತುತ್ತಾದರು. ಇನ್ನು ನನ್ನ ಗತಿಯೂ ಅವರಂತೆಯೇ ಆಗುವುದು. ಹೀಗಾಗಿ ಈ ನನ್ನ ರಾಜ್ಯ, ಸಂಪತ್ತುಗಳನ್ನು ನಾನು ನಂಬಿಕೊಂಡಿರಲು ಸಾಧ್ಯವೆ?

'ಲಕ್ಷಾಂತರ ಬ್ರಹ್ಮರುಗಳ ಅವಸಾನವಾಗಿ ಹೋಗಿದೆ. ಲಕ್ಷಾಂತರ ಚಕ್ರಾಧಿಪತಿಗಳು ಮಣ್ಣಾಗಿ ಹೋಗಿದ್ದಾರೆ. ಹೀಗಿರು ವಾಗ ನನ್ನ ಜೀವನ ಮಾತ್ರವೇ ಸ್ಥಿರವಾಗಿರುತ್ತದೆನ್ನುವ ಖಾತರಿ ಎಲ್ಲಿತಾನೇ ಇದೆ? ಈ ಜಗತ್ತೆಂಬುದು ಒಂದು ಸುದೀರ್ಘ ಕನಸು ಮಾತ್ರ. ಈ ದೇಹವೆಂಬುದು ಮನಸ್ಸಿನ ಕಲ್ಪನೆ ಮಾತ್ರ. ಇವು ಗಳನ್ನು ನಂಬಿಕೊಂಡರೆ, ವಿನಾಶ ಖಂಡಿತ. ಇಂಥ ನನ್ನ ದುರವಸ್ಥೆಗೆ ನನ್ನನ್ನು ಬಿಟ್ಟು ಇನ್ನಾರನ್ನು ತಾನೇ ನಾನು ದೂರಲಿ?'

ನಂತರ ಜನಕನು ತನ್ನ ಮನಸ್ಸಿಗೆ ಹೀಗೆ ಹೇಳಿಕೊಂಡನು :

'ಎಲೈ ಮನಸ್ಸೇ, ನೀನು ಶಾಶ್ವತವೆ? ಖಂಡಿತ ಅಲ್ಲ. 'ನಾನು' ಎಂಬ ಭಾವನೆ, ಈ ಜಗತ್ತಿನ ಅಸ್ತಿತ್ವದ ಬಗೆಗಿನ ಕಲ್ಪನೆ, ಹೊರಗಿನ ವಸ್ತುಗಳ ವೀಕ್ಷಣೆ – ಇದೆಲ್ಲವೂ ನಿನ್ನ ಕಲ್ಪನೆಯಲ್ಲದೆ ಮತ್ತೇನು? ನಿನ್ನಿಂದ ಉದ್ಭೂತವಾದ ಅಹಂಕಾರವು ನನ್ನನ್ನು ಹಿಡಿದು ಕಿತ್ತು ತಿನ್ನುತ್ತಿದೆ. ನಿನ್ನಿಂದಾಗಿ ನೂರಾರು ಆಸೆಗಳನ್ನು ಬೆಳೆಸಿಕೊಂಡು, ಈ ಕ್ಷುದ್ರ ದೇಹದಲ್ಲಿ ಅಹಂಕಾರ ಮತ್ತು ಮಮಕಾರಗಳನ್ನು ಹುಟ್ಟಿಸಿಕೊಂಡು ನರಳಾಡುತ್ತಿದ್ದೇನೆ. ದಿನಗಳು, ರಾತ್ರಿಗಳು ಭರ ಭರನೆ ಸಾಗುತ್ತಿವೆ. ಆದರೂ ಕೇವಲ ನಿನ್ನ ದೆಸೆಯಿಂದ ನಾನು ಆತ್ಮಸ್ವರೂಪವನ್ನು ಗ್ರಹಿಸಲಾಗದೆ ಅಜ್ಞಾನಿಯಾಗಿಯೇ ಉಳಿದಿ ದ್ದೇನೆ.'

ಮತ್ತೆ ಜನಕನು ಸ್ವವಿಶ್ಲೇಷಣೆಯಲ್ಲಿ ತೊಡಗುತ್ತಾನೆ:

'ಕಾಲವೆಂಬುದು ಒಂದು ಮಾಟಗಾರನಂತೆ. ಜಗತ್ತಿನ ಎಲ್ಲ ಜನಗಳನ್ನು ಅದು ಕೈಗೊಂಬೆಯನ್ನಾಗಿ ಮಾಡಿಕೊಂಡುಬಿಟ್ಟಿದೆ. ಜಾದೂಗಾರನು ಚೆಂಡುಗಳನ್ನು ಆಡಿಸುವಂತೆ ನಮ್ಮನ್ನು ಆಡಿಸು ತ್ತಿದೆ. ಸಾಕೋ ಸಾಕು, ಸಾಕೋ ಸಾಕು. ಇಷ್ಟರವರೆಗೆ ನಾನು ಕಳೆದ ಜನ್ಮಗಳೇ ಬೇಕಾದಷ್ಟು ಆಯಿತು! ಇನ್ನು ಇವುಗಳಿಂದ ಬಿಡುಗಡೆ ಪಡೆಯಲೇಬೇಕು. ಒಂದಾದಮೇಲೊಂದರಂತೆ ದುರದೃಷ್ಟಗಳ

ಸರಣಿಯೇ ಎದುರಾಗುತ್ತಿದೆ. ಆದರೂ ಈ ದುಃಖಮಯ ಜೀವನದಲ್ಲಿ ನನಗೆ ಆಸಕ್ತಿ ಎಳ್ಳಷ್ಟೂ ಕುಂದಿಲ್ಲ. ಎಂಥ ಅಸಹ್ಯವಾದ ಸಂಗತಿ ಇದು! ಈ ಎಲ್ಲ ಸಂಗತಿಗಳು ನಶ್ವರವೆಂದೂ ತಿಳಿದೂ ತಿಳಿದೂ ನಾವು ಅವಿನಾಶಿ ತತ್ತ್ವದ ಕಡೆಗೆ ಎಳ್ಳಷ್ಟೂ ಮನಸ್ಸು ಕೊಡುವುದಿಲ್ಲವಲ್ಲ!

'ಅಜ್ಞಾನಿಗಳದು ಅದೆಂಥ ದಯನೀಯ ಸ್ಥಿತಿ! ಪ್ರತಿನಿತ್ಯವೂ ಅವರು ಪಾಪಕಾರ್ಯಗಳಲ್ಲೇ ಮಗ್ನರಾಗಿರುತ್ತಾರೆ. ಯೌವನದಲ್ಲಿ ಕಾಮವಾಸನೆಯ ಜ್ವಾಲೆಯಲ್ಲಿ ಮಾಡಬಾರದ್ದನ್ನೆಲ್ಲ ಮಾಡುತ್ತಾರೆ; ಹೆಣ್ಣು, ಹೊನ್ನು ಮಣ್ಣುಗಳ ಬಂಧನಕ್ಕೆ ಸಿಲುಕಿ ಸಮಯವನ್ನು ವ್ಯರ್ಥಮಾಡಿಕೊಳ್ಳುತ್ತಾರೆ. ವೃದ್ಧಾಪ್ಯದಲ್ಲಿ ಚಿಂತೆಗಳ ಬೆಟ್ಟವನ್ನು ಹೊತ್ತುಕೊಂಡು, ಸಂಸಾರದ ಭಾರವನ್ನು ಭರಿಸಿಕೊಂಡು ಗೋಳಾಡುತ್ತಾರೆ. ಕಾಲಕ್ರಮೇಣ, ದುಃಖ ಮತ್ತು ಪಶ್ಚಾತ್ತಾಪಗಳ ಬೆಂಕಿಯಲ್ಲಿ ಬೆಂದು ಹತಾಶೆಯಿಂದ ಮರಣವನ್ನಪ್ಪುತ್ತಾರೆ! ಹೀಗಿರುವಾಗ, ಯಾರಿಗೆ ತಾನೇ ಶುಭಕಾರ್ಯಗಳನ್ನು ಮಾಡಲು ಪುರುಸೊತ್ತು ದೊರಕುವುದು? ಭಗವಂತನನ್ನು ಆರಾಧಿಸಲು ಸಮಯ ಸಿಗುವುದು?'

ಹೀಗೆ ಜನಕ ಆಲೋಚಿಸುತ್ತ ಹೋದನು. ಈ ಬಗೆಯ ಆತ್ಮವಿಚಾರದಿಂದ ಅವನಿಗೆ ಆತ್ಮಸಾಕ್ಷಾತ್ಕಾರವಾಯಿತು. ಆಗ ಅವನ ಮನಸ್ಸಿನಲ್ಲಿ ಈ ಅನೇಕ ಆಲೋಚನೆಗಳು ಸ್ಫುರಿಸಿದವು:

'ಸಿದ್ಧರ ಗೀತೆಗಳನ್ನು ಕೇಳಿ ನನಗೆ ಜ್ಞಾನೋದಯವಾಯಿತು. ಅವರೇ ನನ್ನ ಗುರುಗಳು ಎಂದು ಪರಿಗಣಿಸುತ್ತೇನೆ. ನಾನೀಗ ನನ್ನ ಮನಸ್ಸನ್ನು ಸಂಪೂರ್ಣವಾಗಿ ಜಯಿಸಿದ್ದೇನೆ. ಆತ್ಮಾರಾಮನಾಗಿ ಆನಂದದಿಂದ ಇದ್ದೇನೆ. ಸಂಸಾರದ ದುಃಖ ಮತ್ತು ಅನಿಷ್ಟಗಳಿಂದ ಸಂಪೂರ್ಣವಾಗಿ ಮುಕ್ತನಾಗಿದ್ದೇನೆ. ಎಲ್ಲ ಬಗೆಯ ದ್ವಂದ್ವಗಳೂ ಭೇದಗಳೂ ನನ್ನಲ್ಲಿ ಮಾಯವಾಗಿಬಿಟ್ಟಿವೆ. ಆತ್ಮನನ್ನೇ ನಾನು ಎಲ್ಲೆಡೆಯೂ ಕಾಣುತ್ತಲಿದ್ದೇನೆ. ಪರಮಶಾಂತಿಯನ್ನು ಹೊಂದಿದ್ದೇನೆ. 'ನಾನು', 'ನನ್ನದು', 'ಇಲ್ಲಿ', 'ಅಲ್ಲಿ', 'ಆಗ' 'ಈಗ' – ಈ ಎಲ್ಲ ಭಾವನೆಗಳೂ ನನ್ನ ಮನಸ್ಸಿನಿಂದ ದೂರವಾಗಿಬಿಟ್ಟಿವೆ. ಇಂಥ ಭ್ರಮೆಯನ್ನು ನಾಶಗೊಳಿಸಿದ ಆತ್ಮಜ್ಞಾನವನ್ನು ನಾನು ಎಷ್ಟು ಕೊಂಡಾಡಿದರೂ ಸಾಲದು.'

ಜನಕ ಮಹಾರಾಜ ಈ ಸಮಾಧಿಯ ಸ್ಥಿತಿಯಲ್ಲಿ ಬಹುಕಾಲ ನೆಲೆನಿಂತಿದ್ದನು.

ಸಮಾಧಿಯಿಂದ ಮರಳಿಬಂದು ಮತ್ತೆ ತನಗೆ ತಾನೇ ಹೀಗೆ ಅಂದುಕೊಂಡನು: 'ನಾನೀಗ ಎಲ್ಲೆಡೆಯೂ ಏಕಮೇವಾದ್ವಿತೀಯ ಅಖಂಡ ಬ್ರಹ್ಮವನ್ನೇ ಕಾಣುತ್ತಲಿದ್ದೇನೆ. ನನ್ನ ಆತ್ಮನಲ್ಲಿ ನನ್ನ ಮನಸ್ಸು ಎಂದೆಂದಿಗೂ ನೆಲೆನಿಂತಿದೆ. ನನ್ನನ್ನು ಯಾವುದೂ ಪರಿಕ್ಷುಬ್ಧಗೊಳಿಸದು. ಎಲ್ಲ ಬಗೆಯ ರಾಗದ್ವೇಷಗಳಿಂದ ನಾನೀಗ ಮುಕ್ತನಾಗಿದ್ದೇನೆ, ಸಮದರ್ಶಿಯಾಗಿದ್ದೇನೆ, ನಿರಾಸಕ್ತನಾಗಿದ್ದೇನೆ.'

ಹೀಗೆಂದು ಜನಕನು ಸುಮ್ಮನೆ ಕೂಡಲಿಲ್ಲ. ಮತ್ತೆ ತನ್ನ ರಾಜ್ಯಭಾರದ ಕಾರ್ಯಗಳಲ್ಲಿ ಮಗ್ನನಾದನು. ಯಾವ ಅಪೇಕ್ಷೆಯೂ ಇಲ್ಲದೆ, ಲಾಭ-ನಷ್ಟಗಳ ಪರಿವೆ ಇಲ್ಲದೆ ತನ್ನ ಕರ್ತವ್ಯವನ್ನು ನಿರ್ವಹಿಸಿದನು. ಕಳೆದುಹೋದದ್ದಕ್ಕೆ ಮರುಗದೆ, ಮುಂದೆ ಬರುವುದಕ್ಕೆ ಚಿಂತಿಸದೆ ಚಿರ ವರ್ತಮಾನದಲ್ಲಿ ಆನಂದದಿಂದ ಇದ್ದನು. ವಿದೇಹ ರಾಜ್ಯದ ಅಧಿಪತಿಯಾಗಿರುವಂತೆಯೇ ಆತ್ಮಸಾಮ್ರಾಜ್ಯದ ಒಡೆಯನೂ ಆದನು. ಜೀವನ್ಮುಕ್ತನಾಗಿ ಸಾರ್ಥಕ ಬಾಳನ್ನು ಬಾಳಿದನು.

ಈ ಕಥೆಯನ್ನು ಹೇಳಿ ಮುಗಿಸಿದ ವಸಿಷ್ಠರು ರಾಮನಿಗೆ ಉಪದೇಶಿಸಿದರು : ''ಓ ರಾಮ, ಜನಕನಂತೆ ನೀನೂ ಆತ್ಮಾವಲೋಕನವನ್ನು ಮಾಡಿಕೋ. ಆತ್ಮಧ್ಯಾನವನ್ನು ಮಾಡು. ಆತ್ಮಜ್ಞಾನವನ್ನು ಪಡೆದುಕೋ.'' ❀

## ಆನಂದದ ನೆಲೆ

ದೇವರು ಸೃಷ್ಟಿಯಲ್ಲೆಲ್ಲ ಅತ್ಯುತ್ತಮವಾದ ಮಾನವನನ್ನು ಸೃಷ್ಟಿಸಿದಾಗ, ಅವನಿಗೆ ಅಮಿತವಾದ ಆನಂದವನ್ನು ಕೊಡುಗೆಯಾಗಿ ನೀಡಿದ. ಆದರೆ ಮಾನವ ಅದನ್ನು ಅನುಭವಿಸುವ ಬದಲು ದೇವರನ್ನೇ ನಿಂದಿಸತೊಡಗಿದ. ಸೃಷ್ಟಿಕರ್ತನಾದ ದೇವರಿಗೆ ತುಂಬಾ ನೋವಾಯಿತು. ಅವನು ದೇವತೆಗಳ ಸಭೆಯೊಂದನ್ನು ಏರ್ಪಡಿಸಿದ. ''ಏನು ಮಾಡಿದರೆ ಮಾನವನಿಗೆ ಈ ಅಮೂಲ್ಯ ಕೊಡುಗೆಯ ಬೆಲೆ ಗೊತ್ತಾಗುವುದು?'' ಎಂಬ ಚರ್ಚೆ ನಡೆಯಿತು. ''ಮಾನವನಿಗೆ ನಿನ್ನ ಕೊಡುಗೆಯ ಬೆಲೆ ಗೊತ್ತಾಗದಿದ್ದರೆ, ಅದನ್ನು ಹಿಂದಕ್ಕೆ ಪಡೆದುಕೋ'' ಎಂದ ಒಬ್ಬ ದೇವತೆ. ''ಅದಾಗದು. ಕೊಟ್ಟದ್ದನ್ನು ಮರಳಿ ಪಡೆಯಬಾರದು'' ಎಂದ ಸೃಷ್ಟಿಕರ್ತ. 'ಇನ್ನೇನು ಮಾಡಲಿ?' ಎಂದು ಎಲ್ಲರೂ ಚಿಂತಿಸತೊಡಗಿದರು. ''ಅದನ್ನು ಸಮುದ್ರದ ಆಳದಲ್ಲಿ ಅವಿತಿಡೋಣ. ಮಾನವನಿಗೆ ಅದು ಸಿಗಲಾರದು'' ಎಂದ ಒಬ್ಬ ದೇವತೆ. ''ಆಗದು. ಅವನು ಆಳಕ್ಕೆ ಮುಳುಗಿ ಅದನ್ನು ಕಸಿದುಕೊಳ್ಳುವನು'' ಎಂದು ಇನ್ನೊಬ್ಬ ದೇವತೆ ಉತ್ತರಿಸಿದ. ''ಹಾಗಾದರೆ ಅದನ್ನು ಭೂಮಿಯ ಗರ್ಭದಲ್ಲಿ ಅವಿತು ಬಿಡೋಣ.'' ''ಅದೂ ಸಾಧ್ಯವಿಲ್ಲ. ಅಲ್ಲಿಂದು ಅದನ್ನು ಅಗೆದು ತೆಗೆಯಬಹುದಾದ ಯಂತ್ರಗಳನ್ನು ಅವನು ನಿರ್ಮಿಸಬಲ್ಲ''ಎಂದು ಉತ್ತರ ಬಂತು. ಯಾರ ಸಲಹೆಯೂ ಸರಿ ಕಾಣದೆ, ಕೊನೆಗೆ ಬ್ರಹ್ಮನೇ ಹೇಳಿದ: ''ಅದನ್ನು ನಾವು ಮಾನವನ ಹೃದಯದಲ್ಲೇ ಅವಿತು ಬಿಡೋಣ. ಆಗ ಆನಂದವು ಸದಾಕಾಲ ತನ್ನೊಳಗೇ ಇದ್ದರೂ, ಮಾನವನು ಅದನ್ನರಿಯದೆ, ಅದಕ್ಕಾಗಿ ಹೊರಗೆ ಎಲ್ಲೆಲ್ಲೂ ಹುಡುಕಾಡುತ್ತಾನೆ, ಕೊನೆಯಿಲ್ಲದೆ ಅಲೆದಾಡುತ್ತಾನೆ. ಯಾರು ತನ್ನೊಳಗೇ ಮುಳುಗಿ, ತನ್ನ ಹೃದಯದಲ್ಲೇ ಆನಂದವಿದೆಯೆಂದು ಅರಿತುಕೊಳ್ಳುವನೋ ಅವನಿಗೆ ಆನಂದದ ಅಗಾಧ ನಿಧಿಯೇ ಲಭಿಸುತ್ತದೆ.'' ಕೊನೆಗೆ ಹಾಗೆಯೇ ಆಯಿತು.

*(ಜೆ.ಪಿ.ವಾಸ್ವಾನಿಯವರ 'snacks for the soul' ಗ್ರಂಥದಿಂದ)*

# ಅಷ್ಟಾವಕ್ರ ಗೀತೆಯ ಉಗಮ

**ಕಥೆ:** ರೇವತಿ    **ಚಿತ್ರ:** ಶಂಕರ್

**1** ಜನಕ ಮಹಾರಾಜನ ಆಸ್ಥಾನ.

ಬ್ರಹ್ಮಜ್ಞಾನವನ್ನು ಪಡೆಯುವುದು ಅತ್ಯಂತ ಕಠಿಣ. ವಿದ್ವಾಂಸರೇ, ಈ ವೇದಾಂತ ಗ್ರಂಥದಲ್ಲಿ ಅದೇನನ್ನು ಹೇಳಿದೆ ಎಂಬುದನ್ನು ನನಗೆ ಹೇಳಿ.



ಬ್ರಹ್ಮಜ್ಞಾನವನ್ನು ಪಡೆಯುವುದಕ್ಕೆ ಎಷ್ಟು ಸಮಯ ಬೇಕಾಗುವುದೆಂದರೆ, ಒಬ್ಬ ವ್ಯಕ್ತಿ ಒಂದು ಕುದುರೆಯನ್ನೇರಿ, ಇನ್ನೊಂದು ಬದಿಯ ರಿಕಾಪಿನಲ್ಲಿ ಕಾಲನ್ನಿಡಲು ಎಷ್ಟು ಸಮಯ ತಗಲುವುದೋ ಅಷ್ಟು – ಎಂದು ಈ ಗ್ರಂಥ ಹೇಳುತ್ತದೆ.

**2** ಈ ಜ್ಞಾನವನ್ನು ಪಡೆಯಲು ನಾನು ಬಹಳ ಕಾಲದಿಂದ ಕಾಯುತ್ತಿದ್ದೇನೆ. ಅದು ಅಷ್ಟೊಂದು ಸುಲಭವೆ? ಒಂದು ಕುದುರೆಯನ್ನು ಈಗಲೇ ತೆಗೆದುಕೊಂಡು ಬನ್ನಿ. ಅದನ್ನೊಮ್ಮೆ ಏರಿ ನೋಡುತ್ತೇನೆ. ಗ್ರಂಥದಲ್ಲಿ ಹೇಳಿದಂತೆ ಬ್ರಹ್ಮಜ್ಞಾನ ಪಡೆಯಲು ಬೇಕಾದದ್ದನ್ನೆಲ್ಲ ಒದಗಿಸಿಕೊಡಿ.



ಮಹಾರಾಜ, ಗ್ರಂಥದಲ್ಲಿ ಏನು ಹೇಳಿದೆಯೋ ಅದನ್ನಷ್ಟೇ ನಾನು ತಮಗೆ ವಿವರಿಸಿದ್ದೇನೆ. ನಾನು ತಮಗೆ ಬ್ರಹ್ಮಜ್ಞಾನ ನೀಡಲಾರೆ. ಅದು ನನಗೆ ಅಸಾಧ್ಯ.

**3** ಅಂದರೆ, ಗ್ರಂಥದಲ್ಲಿ ಬರೆದದ್ದೆಲ್ಲ ಸುಳ್ಳೆ? ಉತ್ಪ್ರೇಕ್ಷೆಯ ಮಾತೆ?




ನಿಮಗೆ ಅದನ್ನು ಪ್ರಮಾಣ ಮಾಡಿ ತೋರಿಸಿಕೊಡಲಾಗದಿದ್ದರೆ, ಶುದ್ಧ ಸುಳ್ಳನ್ನೇ ಹೇಳುವ ಗ್ರಂಥವನ್ನು ಉಪದೇಶಿಸಿ, ನನ್ನ ಸಮಯ ಹಾಳು ಮಾಡಿದ್ದಕ್ಕೆ ಶಿಕ್ಷೆ ಅನುಭವಿಸಬೇಕಾದೀತು.

4 ಓ ರಾಜ! ಇದು ಅನ್ಯಾಯ! ಕೇವಲ ನಾನಷ್ಟೇ ಅಲ್ಲ. ಈ ವಿಷಯದಲ್ಲಿ ಇದನ್ನು ಬೇರೆ ಯಾರೂ ಪ್ರಮಾಣ ಮಾಡಿ ತೋರಿಸಿಕೊಡಲಾಗದು.





ಹಾಗಿದ್ದರೆ, ಬ್ರಹ್ಮಜ್ಞಾನವನ್ನು ಸರಿಯಾಗಿ ವಿವರಿಸಿ ಹೇಳುವ ಸಾಮರ್ಥ್ಯ ಇಲ್ಲದ ವಿದ್ವಾಂಸರನ್ನೆಲ್ಲ ಬಂಧಿಸಲು ನಾನು ಆಜ್ಞಾಪಿಸುತ್ತೇನೆ.

5 ಸೆರೆಮನೆಗಳೆಲ್ಲವೂ ವಿದ್ವಾಂಸರಿಂದ ತುಂಬಿಹೋಯಿತು.



6 ಈ ದೇಶದಲ್ಲಿ ವಿದ್ವಾಂಸರು ಬದುಕಲಾಗದು. ನಾವು ನಮ್ಮ ನೆರೆಯ ದೇಶದ ರಾಜಧಾನಿಗೆ ಹೋಗೋಣ.



ಹೌದು, ನೀನು ಹೇಳಿದ್ದೇ ನಿಜ.

7 ವಿದ್ವಾಂಸರೆಲ್ಲ ತಂಡತಂಡವಾಗಿ ದೇಶವನ್ನು ಬಿಟ್ಟು ಹೋಗುತ್ತಿದ್ದುದನ್ನು ಅಷ್ಟಾವಕ್ರ ನೋಡಿದ.
(ಅಷ್ಟಾವಕ್ರ ಮುನಿಗೆ ಆ ಹೆಸರು ಬರಲು ಒಂದು ಕಾರಣವಿದೆ. ಹುಟ್ಟಿದಾಗ ಅವನ ದೇಹದ ಎಂಟು ಅಂಗಗಳು ಊನಗೊಂಡಿದ್ದವು. ಮುಂದೆ ಅವನ ಆ ಕಾಯಿಲೆ ಗುಣವಾದರೂ, ಆ ಹೆಸರು ಹಾಗೆಯೇ ಉಳಿಯಿತು.)

ವಿದ್ವಾಂಸರೇ! ನೀವೆಲ್ಲ ತಂಡ ತಂಡವಾಗಿ ಎಲ್ಲಿಗೆ ಹೋಗುತ್ತಿದ್ದೀರಿ? ಎಲ್ಲಾದರೂ ಸಭೆ, ಸಮಾರಂಭ ನಡೆಯುತ್ತಿದೆಯೆ?



8 ಜನಕ ಮಹಾರಾಜನ ಆಜ್ಞೆಯ ಬಗ್ಗೆ ಅವರೆಲ್ಲ ಅಷ್ಟಾವಕ್ರನಿಗೆ ತಿಳಿಸಿದರು.

ಚಿಂತಿಸಬೇಡಿ. ನಾನು ಜನಕನನ್ನು ಭೇಟಿಯಾಗುತ್ತೇನೆ.



**9**

ಅಷ್ಟಾವಕ್ರನ ಮಹಿಮೆಯನ್ನರಿತ ಜನಕ ಮಹಾರಾಜ ಅವನನ್ನು ಅತ್ಯಾದರದಿಂದ ಬರಮಾಡಿಕೊಂಡು ಸತ್ಕಾರ ಮಾಡಿದ.

ಬ್ರಹ್ಮ, ವಿಷ್ಣು, ಮೊದಲಾದವರೇ ಪೂಜಿಸಿದ ತಮ್ಮಂಥ ವರು ನನ್ನನ್ನು ಭೇಟಿಯಾಗಲು ಬಂದಿರಿ ಎಂದಾಗ ನನ್ನ ಭಾಗ್ಯಕ್ಕೆ ಎಣೆಯೆಲ್ಲಿದೆ?

ಓ ರಾಜ! ನೀನು ಸೆರೆಮನೆ ಯಲ್ಲಿಟ್ಟ ವಿದ್ವಾಂಸರನ್ನೆಲ್ಲ ಈ ಕೂಡಲೇ ಬಿಡುಗಡೆ ಮಾಡು.

ಆಗಲಿ ಮಹರ್ಷಿಗಳೆ, ನೀವು ಹೇಳಿದಂತೆ ಮಾಡುತ್ತೇನೆ.

**10**

ತನಗೆ ಬ್ರಹ್ಮಜ್ಞಾನ ನೀಡುವಂತೆ ಜನಕ ಮಹಾರಾಜ ಅಷ್ಟಾವಕ್ರ ಮುನಿಯನ್ನು ಪ್ರಾರ್ಥಿಸಿದ. ಅಷ್ಟಾವಕ್ರನು ರಾಜನಿಗೆ ಕೂಡಲೇ ಕಾಡಿಗೆ ಏಕಾಂಗಿಯಾಗಿ ತನ್ನೊಡನೆ ಬರುವಂತೆ ಹೇಳಿದ. ಅದಕ್ಕೆ ಒಪ್ಪಿದ ರಾಜನು ಖುಷಿಯೊಂದಿಗೆ ಕಾಡಿಗೆ ಹೋದ.

**11**

ಓ ರಾಜ, ಬ್ರಹ್ಮಜ್ಞಾನ ಪಡೆಯಲು ತಾಳ್ಮೆಯೆನ್ನುವುದು ಅತ್ಯಂತ ಮುಖ್ಯವಾಗಿ ಇರಬೇಕಾದ ಗುಣ. ಮೊದಲಿಗೆ ನೀನೇ ಹೇಳು – ನಮ್ಮಿಬ್ಬರ ಸಂಬಂಧ ಎಂಥದು?

ಗುರುಗಳೆ, ನಾನು ನಿಮ್ಮ ಶಿಷ್ಯ.

ಈಗ ಹೇಳು, ನಿಜವಾದ ಶಿಷ್ಯನು ಮೊದಲು ಮಾಡಬೇಕಾದ ಕರ್ತವ್ಯವೇನು?

ಅವನು ಪೂರ್ಣವಾಗಿ ತನ್ನನ್ನು ಗುರುವಿಗೆ ಸಮರ್ಪಿಸಿಕೊಳ್ಳಬೇಕು.

ಆಹ! ಈಗ ನನಗೆ ಎಲ್ಲವೂ ಅರ್ಥವಾಯಿತು. ನಾನು ಸಂಪೂರ್ಣವಾಗಿ, ಹೃತ್ಪೂರ್ವಕವಾಗಿ ನಿಮಗೆ ಶರಣಾಗತನಾಗಿದ್ದೇನೆ.

**12**




ಅಷ್ಟಾವಕ್ರ ಅವನನ್ನು ಅನುಗ್ರಹಿಸಿದ. ಜನಕಮಹಾರಾಜನು ಸಂಪೂರ್ಣವಾಗಿ ತನ್ನನ್ನು ತಾನು ಮರೆತು, ಬ್ರಹ್ಮಾನಂದದಲ್ಲಿ ಮುಳುಗಿದ.

13 ಕೆಲವು ದಿನಗಳಾದ ಮೇಲೆ ಮಂತ್ರಿಗಳು ಹಾಗೂ ಪ್ರಜೆಗಳು ತಮ್ಮ ರಾಜನನ್ನು ಹುಡುಕುತ್ತಾ ಕಾಡಿಗೆ ಬಂದರು.




14 ಕೆಲವು ದಿನಗಳ ನಂತರ ...




15




ಉಳಿದವರನ್ನೆಲ್ಲ ಅಲ್ಲಿಂದ ದೂರ ಹೋಗುವಂತೆ ಹೇಳಿ, ಅಷ್ಟಾವಕ್ರನು ಜನಕನಿಗೆ '**ತತ್ತ್ವಮಸಿ**' ('ನೀನು ಅದೇ ಆಗಿದ್ದೀಯೆ') ಎಂಬ ಮಹಾವಾಕ್ಯವನ್ನು ಉಪದೇಶಿಸಿದ.

16




ಅಷ್ಟಾವಕ್ರನು ರಾಜನ ಸಂದೇಹವನ್ನೆಲ್ಲ ಪರಿಹರಿಸಿದ. ಜನಕ ಮಹಾರಾಜನ ಮತ್ತು ಅಷ್ಟಾವಕ್ರಮುನಿಯ ಸಂಭಾಷಣೆಯನ್ನು ಋಷಿಗಳು ಹಾಗೂ ವಿದ್ವಾಂಸರು ಸಮಾನವಾಗಿ ಕೊಂಡಾಡುತ್ತಾರೆ. ಈ ಕೃತಿಯನ್ನು '**ಅಷ್ಟಾವಕ್ರ, ಗೀತೆ**' ಎಂದು ಕರೆಯುತ್ತಾರೆ.







# ವಿಶಾಖಪಟ್ಟಣಂ ರಾಮಕೃಷ್ಣ ಮಿಷನ್ನಿನ 'ಶ್ರೀರಾಮಕೃಷ್ಣ ವಿಶ್ವಭಾವೈಕ್ಯ ಮಂದಿರ'ದ ರಜತ ಮಹೋತ್ಸವ

ವಿಶಾಖಪಟ್ಟಣಂ ಶ್ರೀರಾಮಕೃಷ್ಣ ಮಿಷನ್ನಿನ '**ಶ್ರೀರಾಮಕೃಷ್ಣ ವಿಶ್ವಭಾವೈಕ್ಯ ಮಂದಿರ**'ವು ೧೯೯೧ರ ಜನವರಿಯಲ್ಲಿ ಉದ್ಘಾಟಿಸಲ್ಪಟ್ಟಿದ್ದು, ಅದರ ರಜತ ಮಹೋತ್ಸವವನ್ನು ೨೦೧೫ರ ಅಕ್ಟೋಬರ್ ೧೫ರಿಂದ ೧೮ರ ವರೆಗೆ ಆಚರಿಸಲಾಯಿತು. ಈ ಮಹೋತ್ಸವವನ್ನು ರಾಮಕೃಷ್ಣ ಮಹಾಸಂಘದ ಸಹ ಕಾರ್ಯದರ್ಶಿಗಳಾದ ಸ್ವಾಮಿ ಬಲಭದ್ರಾನಂದಜೀ ಮಹಾರಾಜ್ ಅವರು ಉದ್ಘಾಟಿಸಿದರು. ಉದ್ಘಾಟನಾ ಸಮಾರಂಭದ ಆರಂಭದಲ್ಲಿ ವೇದಘೋಷ, ಭಜನೆಯ ನಂತರ ವಿಶಾಖಪಟ್ಟಣಂ ರಾಮಕೃಷ್ಣ ಮಿಷನ್ನಿನ ಕಾರ್ಯದರ್ಶಿಗಳಾದ ಸ್ವಾಮಿ ಆತ್ಮವಿದಾನಂದಜಿ ಮಹಾರಾಜ್ ಸ್ವಾಗತ ಕೋರಿದರು. ಅನಂತರ ಸ್ವಾಮಿ ಬಲಭದ್ರಾನಂದಜಿ, ಕೊಯಮತ್ತೂರು ರಾಮಕೃಷ್ಣ ಮಿಷನ್ನಿನ ಕಾರ್ಯದರ್ಶಿಗಳಾದ ಸ್ವಾಮಿ ಅಭಿರಾಮಾನಂದಜಿ, ಹೈದರಾಬಾದ್ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಜ್ಞಾನದಾನಂದಜಿ ಹಾಗೂ ಮೈಸೂರು ರಾಮಕೃಷ್ಣ ಆಶ್ರಮದ ಅಧ್ಯಕ್ಷರಾದ ಸ್ವಾಮಿ ಮುಕ್ತಿದಾನಂದಜಿಯವರು ಭಾಷಣ ಮಾಡಿದರು. ಕೊನೆಯಲ್ಲಿ ಸ್ವಾಮಿ ಜ್ಞಾನದಾನಂದಜಿಯವರಿಂದ '**ಭಜನ ಸಂಧ್ಯಾ**' ಕಾರ್ಯಕ್ರಮ ನಡೆಯಿತು.

ಮಹೋತ್ಸವದ ಅಂಗವಾಗಿ ಅಕ್ಟೋಬರ್ ೧೬ ರಿಂದ ೧೮ರ ವರೆಗೆ ಭಕ್ತರಿಗಾಗಿ ಮೂರು ದಿನಗಳ ಆಧ್ಯಾತ್ಮಿಕ ಶಿಬಿರವನ್ನು ಏರ್ಪಡಿಸಲಾಗಿತ್ತು. ವಿವಿಧ ವಿಷಯಗಳಿಗೆ ಸಂಬಂಧಪಟ್ಟ ಭಾಷಣ, ಪ್ರಶ್ನೋತ್ತರ, ಭಜನೆ, ಅಷ್ಟೋತ್ತರ ಶತನಾಮಾರ್ಚನೆ ಮತ್ತು ಆರತಿ, ಪುರಾಣ ಪ್ರವಚನ, ನೃತ್ಯ , ಭಕ್ತಿಸಂಗೀತ ಮೊದಲಾದ ಕಾರ್ಯಕ್ರಮಗಳನ್ನು ರಾಮಕೃಷ್ಣ ಮಹಾಸಂಘದ ವಿವಿಧ ಕೇಂದ್ರಗಳ ಸಂನ್ಯಾಸಿಗಳು ಹಾಗೂ ಇತರ ಕಲಾವಿದರು ನಡೆಸಿಕೊಟ್ಟರು. ಆಂಧ್ರಪ್ರದೇಶ ಹಾಗೂ ಇತರ ರಾಜ್ಯಗಳಿಂದ ಬಂದ ಸುಮಾರು ೪೦೦ ಮಂದಿ ಪ್ರತಿನಿಧಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ದಿನಾಂಕ ೧೮ರಂದು ನಡೆದ ಸಾರ್ವಜನಿಕ ಸಭಾ ಕಾರ್ಯಕ್ರಮದ ಆರಂಭದಲ್ಲಿ ವಿಶಾಖಪಟ್ಟಣಂ **ರಾಮಭಕ್ತ ವೃಂದ** ದವರಿಂದ ಭಜನೆ ನಡೆಯಿತು. ವಿಜಯವಾಡ ರಾಮಕೃಷ್ಣ ಮಿಷನ್ನಿನ ಕಾರ್ಯದರ್ಶಿಗಳಾದ ಸ್ವಾಮಿ ಶಶಿಕಾಂತಾನಂದಜಿ ಹಾಗೂ ಗುಂಟೂರಿನ ಡಾ. ಪನ್ನಲ ಶ್ಯಾಮಸುಂದರ ಮೂರ್ತಿಯವರು '**ದೇವಾಲಯಗಳ ಪ್ರಸ್ತುತತೆ**' ಎಂಬ ವಿಷಯದ ಬಗ್ಗೆ ವಿಶೇಷ ಭಾಷಣ ಮಾಡಿದರು. ಕೊಯಮತ್ತೂರು ರಾಮಕೃಷ್ಣ ಮಿಷನ್ನಿನ ಕಾರ್ಯದರ್ಶಿಗಳಾದ ಸ್ವಾಮಿ ಅಭಿರಾಮಾನಂದಜಿ ಮಹಾರಾಜ್ ಅವರು ಅಧ್ಯಕ್ಷತೆ ವಹಿಸಿದ್ದರು.













Managing Editor : Swami Muktidananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಹನುಮಜಯಂತಿ ಹಾಗೂ ಕ್ರಿಸ್‌ಮಸ್ ಹಬ್ಬದ ಶುಭಾಶಯಗಳು

## ಪ್ರವಾಸಿಗರಿಗೆ ಸಂತೋಷದ ಸುದ್ದಿ...

## ಅರ್ಕಿಡ್ ಟ್ರಾವಲ್ ಅಂಡ್ ಟೂರ್ಸ್‌ನ ನೂತನ ಶಾಖೆಯನ್ನು ಮಲ್ಲೇಶ್ವರಂ ಸಂಪಿಗೆ ರಸ್ತೆ, 11ನೇ ಕ್ರಾಸ್, ಯತಿರಾಜಮಠ ಕಟ್ಟಡದಲ್ಲಿ ಪ್ರಾರಂಭಿಸಿದ್ದೇವೆ.



### 3 ದಿನಗಳ ಅಹೋಬಿಲಂ ನವನಾರಸಿಂಹ ಪ್ರವಾಸ

ಪ್ರವಾಸ ಸ್ಥಳಗಳು: ಜ್ವಾಲಾನರಸಿಂಹ, ಪಾವನನರಸಿಂಹ, ವರಹಾನರಸಿಂಹ, ಕಾರಂಜಿನರಸಿಂಹ, ಮಾಲೋಲನರಸಿಂಹ, ಯೋಗನರಸಿಂಹ, ಭಾರ್ಗವನರಸಿಂಹ, ಉಗ್ರನರಸಿಂಹ, ಛತ್ರವಟನರಸಿಂಹ ಹಾಗೂ ಕೆಳಗಿನ ಲಕ್ಷ್ಮೀನರಸಿಂಹ

ಜನವರಿ, ಫೆಬ್ರವರಿ, ಮಾರ್ಚ್

### 6 ದಿನಗಳ ಶ್ರೀಲಂಕಾ ಪ್ರವಾಸ (ರಾಮಾಯಣ ಕಾಲದ ಸ್ಥಳ ವೀಕ್ಷಣೆ)

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ,
ಹನುಮಾನ್ ದೇವಸ್ಥಾನ ಹಾಗೂ ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು

ಜನವರಿ, ಫೆಬ್ರವರಿ, ಮಾರ್ಚ್

### 15 Days & 18 Days UK - Europe Tour
### 18 Days America including Bahamas Cruise

**Book early get Big Discount before 31st Dec. 2015**

Starting From 2016

### 5 ದಿನಗಳ ದುಬೈ, ಅಬುದಾಬಿ, ಶಾರ್ಜ ಪ್ರವಾಸ

ದುಬೈ ಸಿಟಿ ಟೂರ್, ಬುರ್ಜ್ ಕಲೀಫಾ, ಡೌ ಕ್ರೂಸ್, ಡೆಸರ್ಟ್ ಸಫಾರಿ
ಅಬುದಾಬಿ ಸಿಟಿ ಟೂರ್, ಶಾರ್ಜ ಸಿಟಿ ಟೂರ್

ದುಬೈ ಶಾಪಿಂಗ್ ಫೆಸ್ಟಿವಲ್ ಸ್ಪೆಷಲ್

### 7 ದಿನಗಳ ಸಿಂಗಾಪುರ – ಮಲೇಶಿಯ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್, ಬರ್ಡ್‌ಪಾರ್ಕ್, ಸಾಂಗ್ ಆಫ್ ಸೀ
ಮಲೇಶಿಯ : ಕೌಲಲೊಂಪುರ್ ಸಿಟಿ ಟೂರ್, ಬಾಟು ಗುಹೆ,ಪುತ್ರಜಯ, ಜಂಟಿಂಗ್ ಹೈಲ್ಯಾಂಡ್,
ಮಲಾಕ ಸಿಟಿ ಟೂರ್, ಮಲಾಕ ಫೆರ್ರಿ, ಜುಹೊರ್‌ಬಾರು

ಜನವರಿ, ಫೆಬ್ರವರಿ, ಮಾರ್ಚ್

### 8 ದಿನಗಳ ಕಾಂಬೋಡಿಯಾ – ಥೈಲ್ಯಾಂಡ್ ಪ್ರವಾಸ

ಕಾಂಬೋಡಿಯಾ – ಸಿಯಾಮ್‌ರಿಪ್, ಅಂಕೂರ್‌ವಾಟ್, ಟೋನ್ ಸ್ಯಾಪ್ ಸರೋವರ,
ತಾಪ್ರಾಮ್, ಬಯಾನ್, ಬಪೂನ್ ದೇವಾಲಯಗಳು, ಥೈಲ್ಯಾಂಡ್ – ಪಟ್ಟಾಯ,
ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ವಾಕರ್ ಸ್ಟ್ರೀಟ್

ಜನವರಿ, ಫೆಬ್ರವರಿ, ಮಾರ್ಚ್

## Orchid Travel & Tours

**Head Office : Basavanagudi**
# 98, 1st Floor, D.V.G. Road
Basavanagudi, Bangalore - 560 004.
**Tel : 080-26670646, 26621983**

**Branch Office : Malleshwaram**
# 198, 1st Floor, 11th Cross, Yathirajmath Building
Malleshwaram, Bangalore - 560 003.
**Tel : 080-41204155, 23445559**

**www.orchidtours.net**

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ : **9900080799, 9900080793, 9900080794**

VIVEKA PRABHA (KANNADA MONTHLY)
December 2015, Vol.16, No.12 No.of pages : 44

Registered With Registrar of News Papers Of India under 72356/2000.postal Regn.No.KA/SK/MYS/480/ 2015-17. LICENCED TO POST W.P.P.AT YADAVAGIRI MYSORE 570 020, VIDE LICENCE NO.SK/WPP/MYS/155/2013-15



Printed at mayur graphics,Bangalore